# ಜನಸಂಖ್ಯಾ ಸಮಸ್ಯೆ

ಬಿ. ವಿಜಯರಾಘವ ರಾವ್




ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

JANASANKYA SAMASYE by B. Vijayaraghava Rao
Published by Prasaranga, Bangalore University, Bangalore
Pp. 48+viii



ಪ್ರಕಾಶಕರು :
ಹೆಚ್. ಆರ್. ದಾಸೇಗೌಡ
ನಿರ್ದೇಶಕರು
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560056

ಬೆಲೆ : 50 ಪೈಸೆ

ಮುದ್ರಣ :
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ–ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದು ಅವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನ ಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ನಾಲ್ಕೈದು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ, ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ

ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

ಈ ಹೊತ್ತಿಗೆಯನ್ನು ಹೊರತರುವಲ್ಲಿ ಉಪನ್ಯಾಸವನ್ನು ನೀಡಿ ಮತ್ತು ಸಕಾಲಕ್ಕೆ ಹಸ್ತಪ್ರತಿಯನ್ನು ಒದಗಿಸಿ ಸಹಕರಿಸಿದ ಶ್ರೀಯುತ ವಿಜಯರಾಘವ ರಾವ್ ಅವರು ಕನ್ನಡದ ಜನತೆಗೆ ಉಪಯುಕ್ತ ಸೇವೆ ಸಲ್ಲಿಸಿದ್ದಾರೆ. ವಿಶ್ವವಿದ್ಯಾಲಯದ ಪರವಾಗಿ ಅವರಿಗೆ ನಮ್ಮ ವಂದನೆಗಳು.

ಎಚ್. ನರಸಿಂಹಯ್ಯ
ಉಪಕುಲಪತಿ

## ಅರಿಕೆ

ಬೆಂಗಳೂರು ವಿಶ್ವವಿದ್ಯಾಲಯದ "ಪ್ರಸಾರಾಂಗ" ವಿಭಾಗವು ನನ್ನನ್ನು "ಜನಸಂಖ್ಯಾ ಸಮಸ್ಯೆ"ಯ ಬಗ್ಗೆ ಒಂದು ಉಪನ್ಯಾಸವನ್ನು ಮಾಡಬೇಕೆಂದು ಕೇಳಿತ್ತು. ಆ ಕೋರಿಕೆಯ ಮೇಲೆ ಚಿಕ್ಕಬಳ್ಳಾಪುರದಲ್ಲಿ ಉಪನ್ಯಾಸವನ್ನು ಕೊಟ್ಟಿದ್ದೆ. ಆ ಉಪನ್ಯಾಸವನ್ನು ವಿಸ್ತರಿಸಿ, ಅದಕ್ಕೆ ಸಂಬಂಧಪಟ್ಟ ಇತರ ಕೆಲವು ವಿಷಯಗಳನ್ನು ಸೇರಿಸಿ ಈ ಕಿರುಹೊತ್ತಿಗೆಯನ್ನು ಸಿದ್ಧಪಡಿಸಿದ್ದೇನೆ.

ಈ ಪುಸ್ತಕವನ್ನು ಸಿದ್ಧಪಡಿಸಲು ನೆರವಾದ ಬೆಂಗಳೂರು ವಿಶ್ವವಿದ್ಯಾಲಯದ 'ಪ್ರಸಾರಾಂಗ' ವಿಭಾಗದ ನಿರ್ದೇಶಕರಾದ ಶ್ರೀ ಹೆಚ್. ಆರ್. ದಾಸೇಗೌಡರಿಗೂ, ಭಾರತ ಜನಸಂಖ್ಯಾ ಯೋಜನೆಯಲ್ಲಿ ಉಪನಿರ್ದೇಶಕರಾಗಿರುವ ಡಾ॥ ಕೆ. ಶೇಷಗಿರಿರಾವ್‌ರವರಿಗೂ ಮತ್ತು ನನ್ನ ಎಲ್ಲ ಸಹದ್ಯೋಗಿಗಳಿಗೂ ನನ್ನ ಮನಃಪೂರ್ವಕ ಕೃತಜ್ಞತೆಗಳು.

**ಬಿ. ವಿಜಯರಾಘವ ರಾವ್**
ಜನಸಂಖ್ಯಾ ಶಿಕ್ಷಣಾಧಿಕಾರಿ
ಭಾರತ ಕುಟುಂಬ ಯೋಜನಾ ಸಂಸ್ಥೆ
ಬೆಂಗಳೂರು ಶಾಖೆ

# ಜನಸಂಖ್ಯಾ ಸಮಸ್ಯೆ

ಜಗತ್ತು ಇಂದು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಪ್ರತಿಯೊಂದು ದೇಶವೂ ತನ್ನದೇ ಆದ ಸಮಸ್ಯೆಗಳನ್ನು ಎದುರಿಸುತ್ತಿದೆ. ಮುಂದುವರಿದ ರಾಷ್ಟ್ರಗಳಲ್ಲಿ ಕಲುಷಿತ ವಾತಾವರಣ ಹಾಗೂ ಅಣುಸ್ಫೋಟನಾ ಪರಿಣಾಮಗಳು ಸಮಸ್ಯೆಯಾದರೆ, ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಆಹಾರ, ವಸತಿ ಮತ್ತು ಉದ್ಯೋಗಗಳು ಸಮಸ್ಯೆಗಳಾಗಿವೆ. ವಿಶ್ವದ ಹೆಚ್ಚು ರಾಷ್ಟ್ರಗಳು ಎದುರಿಸುತ್ತಿರುವ ಭೀಕರ ಸಮಸ್ಯೆಗಳಲ್ಲಿ ಆಹಾರ ಸಮಸ್ಯೆ, ತೈಲ ಸಮಸ್ಯೆ ಹಾಗೂ ಜನಸಂಖ್ಯೆ ಸಮಸ್ಯೆಗಳು ಬಹಳ ಮುಖ್ಯವಾದವುಗಳು. ಈ ಸಮಸ್ಯೆಗಳ ಪರಿಣಾಮ ಕೆಲವು ದೇಶಗಳಿಗೆ ಮಾತ್ರ ಸೀಮಿತವಾಗದೆ, ವಿಶ್ವದ ಎಲ್ಲಾ ರಾಷ್ಟ್ರಗಳಿಗೂ ಮುಟ್ಟಿದೆ. ಎಲ್ಲ ಸಮಸ್ಯೆಗಳಿಗೂ ಮೂಲಕಾರಣವಾಗಿ ಇಡೀ ವಿಶ್ವದ ಗಮನ ಹರಿಸಿರುವ ಸಮಸ್ಯೆಯಾದ "ಜನಸಂಖ್ಯಾ ಸಮಸ್ಯೆ"ಗೆ ಹೆಚ್ಚಿನ ಪ್ರಾಮುಖ್ಯತೆ ನೀಡುವುದು ಅತ್ಯವಶ್ಯಕ.

ರುಮೇನಿಯಾ ದೇಶದ ಬುಕಾರೆಸ್ಟಿನಲ್ಲಿ 1974ನೆಯ ಇಸವಿ ಆಗಸ್ಟ್ ತಿಂಗಳಲ್ಲಿ ನಡೆದ "ವಿಶ್ವ ಜನಸಂಖ್ಯೆ ಸಮ್ಮೇಳನ", ಜನಸಂಖ್ಯಾ ಸಮಸ್ಯೆಯ ದೃಷ್ಟಿಯಿಂದ ಚರಿತ್ರಾರ್ಹವಾದದ್ದು. ಈ ಸಮ್ಮೇಳನದಲ್ಲಿ ಪ್ರಪಂಚದ ಎಲ್ಲ ರಾಷ್ಟ್ರಗಳ ಪ್ರತಿನಿಧಿಗಳು ಭಾಗವಹಿಸಿ, ಸಮಸ್ಯೆಯ ಅನೇಕ ಮುಖಗಳನ್ನು ಚರ್ಚಿಸಿ ಪರಿಶೀಲಿಸಿದರು. ವಿಶ್ವಸಂಸ್ಥೆಯು

ಏರ್ಪಡಿಸಿದ ಈ ಸಮ್ಮೇಳನದಲ್ಲಿ ಭಾಗವಹಿಸಿದ ಎಲ್ಲಾ ರಾಷ್ಟ್ರಗಳೂ ಸಹ "ಜನಸಂಖ್ಯಾ ಸಮಸ್ಯೆ"ಯನ್ನು ಜಾಗತಿಕ ಸಮಸ್ಯೆಯೆಂದು ಪರಿಗಣಿಸಿ, ಇದರ ಪರಿಹಾರಕ್ಕಾಗಿ ಎಲ್ಲರೂ ಪಾಲ್ಗೊಳ್ಳಬೇಕೆಂದು ಕರೆ ನೀಡಿದವು. "ವಿಶ್ವ ಜನಸಂಖ್ಯಾ ನೀತಿ"ಯ ಕರಡು ರೂಪರೇಷೆಯನ್ನು ಪ್ರಕಟಿಸಿದ್ದು, ಈ ಸಮ್ಮೇಳನದ ಗಮನಾರ್ಹ ಸಾಧನೆಯಾಗಿದೆ.

ಈ ವಿಶ್ವ ಸಮ್ಮೇಳನದ ನಂತರ ಎಲ್ಲಾ ರಾಷ್ಟ್ರಗಳೂ ತಮ್ಮದೇ ಆದ ಜನಸಂಖ್ಯಾ ನೀತಿಯನ್ನು ಕೈಗೊಳ್ಳುತ್ತಿರುವುದು ತುಂಬಾ ಸಂತೋಷದ ವಿಷಯ.

**ಭಾರತ ಜನಸಂಖ್ಯಾ ಸಮಸ್ಯೆಯ ವಿಶೇಷತೆ**

ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲೊಂದಾದ ಭಾರತವೂ ಸಹ ತನ್ನದೇ ಆದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದು ಆಶ್ಚರ್ಯಕರವೇನಲ್ಲ. ನಾವು ಎದುರಿಸುತ್ತಿರುವ ಭೀಕರ ಸಮಸ್ಯೆಗಳಲ್ಲಿ ಆಹಾರ ಕೊರತೆ, ವಿದ್ಯಾಭ್ಯಾಸ ಸೌಲಭ್ಯಗಳ ಕೊರತೆ, ವಸತಿ ಸೌಕರ್ಯಗಳ ಕೊರತೆ ಮತ್ತು ನಿರುದ್ಯೋಗ ಸಮಸ್ಯೆಗಳು ಬಹಳ ಮುಖ್ಯವಾದವುಗಳು. ಸ್ವಾತಂತ್ರ್ಯ ಬಂದನಂತರ ಈ ಎಲ್ಲ ಸಮಸ್ಯೆಗಳ ಪರಿಹಾರಕ್ಕಾಗಿ ಸಾಕಷ್ಟು ಪ್ರಯತ್ನ ಮಾಡಲಾಗಿದೆ. ಆದರೆ, ಜನಸಂಖ್ಯಾ ಸ್ಫೋಟನೆಯಿಂದಾಗಿ ಈ ಪ್ರಯತ್ನಗಳ ಫಲ ಜನತೆಗೆ ಪೂರ್ಣವಾಗಿ ದೊರಕಿಲ್ಲ. ನಮ್ಮಲ್ಲಿರುವ ಸಮಸ್ಯೆಗಳಿಗೆ ಜನಸಂಖ್ಯಾ ಸ್ಫೋಟನೆ ಮೂಲ ಕಾರಣವಾಗಿರುವುದೇ ಅಲ್ಲದೆ, ಅನೇಕ ಸಾಮಾಜಿಕ ಸಮಸ್ಯೆಗಳು ಭೀಕರ ರೂಪ ತಳೆಯಲು ಅದು ಸಹಕಾರಿಯಾಗಿದೆ. ಜನಸಂಖ್ಯಾ ಸಮಸ್ಯೆಯ ಪರಿಣಾಮ

ಎಲ್ಲಾ ದಿಕ್ಕಿನಲ್ಲಿ ಬೀರಿದ್ದು, ದೇಶದ ಪ್ರಗತಿಗೆ ಅಡೆತಡೆಗಳನ್ನುಂಟು ಮಾಡಿದೆ.

**"ಜನಸಂಖ್ಯೆ" ಒಂದು ಸಮಸ್ಯೆಯೇ ?**

ಭಾರತದಲ್ಲಿ ಜನಸಂಖ್ಯೆ ಒಂದು ಸಮಸ್ಯೆ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಈ ಸಮಸ್ಯೆಯ ಪರಿಹಾರಕ್ಕಾಗಿ

**ಇಂದು ಭೂಗೋಳ ಗಂಡಾಂತರದಲ್ಲಿದೆ ! !**



ಚಿತ್ರ : ಜನ ಗೋಳದಿಂದ ಉದುರುತ್ತಿದ್ದಾರೆ
ಒಂದೊಂದು ಚದುರ ಮೈಲಿಗೂ ಜನಸಂಖ್ಯೆ ಸ್ಥಳವಿಲ್ಲದಂತೆ ತುಂಬಿದೆ

ಕೈಗೊಳ್ಳಬೇಕಾಗಿರುವ ಕಾರ್ಯಕ್ರಮಗಳಲ್ಲಿ ವಾದವಿವಾದಗಳು ತಲೆದೋರಬಹುದು. ಜನಸಂಖ್ಯೆಯು ಖಂಡಿತವಾಗಿಯೂ ಸಮಸ್ಯೆಯಾಗಿದೆ ಎಂಬುದನ್ನು ಈ ಕೆಳಗಿನ ಕಾರಣಗಳು ಸ್ಪಷ್ಟೀಕರಿಸುತ್ತವೆ. :

1. ತಜ್ಞರ ಅಂದಾಜಿನ ಪ್ರಕಾರ ಭಾರತದ ಸದ್ಯದ ಉತ್ಪಾದನೆ ಹಾಗೂ ಸಂಪತ್ತು ಸುಮಾರು 450 ದಶಲಕ್ಷ ಜನರಿಗೆ ಆಹಾರ, ವಸತಿ ಮತ್ತು ಇತರೆ ಅವಶ್ಯಕತೆಗಳನ್ನು ನೀಡಬಲ್ಲದು. ಒಂದು ವೇಳೆ ಭಾರತದ ಜನಸಂಖ್ಯೆ 450 ದಶಲಕ್ಷ ಮೀರಿದರೆ, ಅದು "ಅಪಾಯದ-ಚಿಹ್ನೆ". ನಮ್ಮ ದೇಶದ ಜನಸಂಖ್ಯೆ ಈ ಅಪಾಯದ ಚಿಹ್ನೆಯನ್ನು ದಾಟಿರುವುದಲ್ಲದೆ, ಸುಮಾರು 150 ದಶ ಲಕ್ಷ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ. ಎಲ್ಲ ಕ್ಷೇತ್ರಗಳಲ್ಲೂ ರಾಷ್ಟ್ರವು ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದರೂ, ಅದರ ಫಲವನ್ನು ವೇಗವಾಗಿ ಬೆಳೆಯುತ್ತಿರುವ ಜನಸಂಖ್ಯೆ ನುಂಗಿಹಾಕಿದೆ. ಸುಮಾರು ಶೇ. 40 ಭಾಗದಷ್ಟು ಜನರಿಗೆ ಅತ್ಯವಶ್ಯಕವಾದ ಕನಿಷ್ಠ ಆಹಾರ ಸೌಲಭ್ಯವೂ ದೊರಕುತ್ತಿಲ್ಲ. ಇದಲ್ಲದೆ, ಬೆಳೆಯುತ್ತಿರುವ ಜನಸಂಖ್ಯೆಯ ವೇಗ ಮುಂದುವರಿಯುತ್ತಲೇ ಇದ್ದು, ಜನರು ಬಡತನದ ರೇಖೆಯಿಂದ ಹೊರಬರಲು ಅಸಾಧ್ಯವಾಗುತ್ತಿದೆ.

2. ಈಗ ನಮ್ಮಲ್ಲಿರುವ ಜನರೇ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕಷ್ಟಪಡುತ್ತಿರುವಾಗ, ಪ್ರತಿವರ್ಷವೂ 13 ದಶಲಕ್ಷದಷ್ಟು ಹೆಚ್ಚು ಜನರನ್ನು ಜನಸಂಖ್ಯೆಗೆ ಸೇರಿಸುತ್ತಿರುವುದು ಸಮಸ್ಯೆಯನ್ನು ಮತ್ತಷ್ಟು ಭೀಕರಗೊಳಿಸಿದೆ. ಪಟ್ಟಿ (1) ರಲ್ಲಿ ಭಾರತದಲ್ಲಾಗುವ ಜನನಗಳ ಹಾಗೂ ಮರಣಗಳ ಅಂಕಿ-ಅಂಶಗಳನ್ನು ತಿಳಿಯಬಹುದು.

### ಪಟ್ಟಿ–1

## ಭಾರತದಲ್ಲಿ ಜನಸಂಖ್ಯಾ ಬೆಳವಣಿಗೆಯ ದರ

| ಕಾಲ | ಜನನಗಳ ಸಂಖ್ಯೆ | ಪ್ರತಿವರ್ಷ |
|---|---|---|
| 1½ ಘಳಿಗೆ | 01 | ಜನನಗಳು—21 ದಶಲಕ್ಷಗಳು |
| 1 ನಿಮಿಷ | 40 | ಮರಣಗಳು—8 ದಶಲಕ್ಷಗಳು |
| 1 ಗಂಟೆ | 2,400 | |
| 1 ದಿನ | 57,600 | ಜನಸಂಖ್ಯೆಯವೃದ್ಧಿ–13 ದಶಲಕ್ಷಗಳು |

ಮೂಲ: ಹಂದೆ, ಕೆ. ಆರ್.: "ಜನಸಂಖ್ಯಾ ಶಿಕ್ಷಣದ ರೂಪ ರೇಷಗಳು"
ಮಣಿಪಾಲ ಕಾಲೇಜ್ ಆಫ್ ಎಡ್ಯುಕೇಷನ್
ಉಡ್ಪಿ, ದಕ್ಷಿಣ ಕನ್ನಡ
(ಪುಟ 16)

3. ಮುಖ್ಯವಾದ ಮೂರನೆಯ ಕಾರಣವೆಂದರೆ, ಭಾರತದ ಭೂಭಾಗ ಬೇರೆ ದೇಶದೊಂದಿಗೆ ಹೋಲಿಸಿದಾಗ ಬಹಳಷ್ಟು ಕಡಿಮೆಯಿದೆಯೆಂದು ತಿಳಿದುಬರುತ್ತದೆ. ಆಸ್ಟ್ರೇಲಿಯಾ ಖಂಡದ ಭೂಭಾಗ, ಭಾರತದ ಭೂಭಾಗ ಕ್ಕಿಂತಲೂ ಸುಮಾರು 2¼ ಯಷ್ಟು ಹೆಚ್ಚಾಗಿದೆ. ಆದರೆ, ಆಸ್ಟ್ರೇಲಿಯಾದ ಒಟ್ಟು ಜನಸಂಖ್ಯೆ ಕೇವಲ 13 ದಶಲಕ್ಷ ಮಾತ್ರ. ಈ ಜನ ಸಂಖ್ಯೆಯನ್ನು ಭಾರತವು ಒಂದೇ ವರ್ಷ ದಲ್ಲಿ ತನ್ನ ಜನಸಂಖ್ಯೆಗೆ ಸೇರಿಸುತ್ತದೆ! ಭಾರತ ದೇಶ ಮತ್ತು ರಷ್ಯಾ ದೇಶಗಳ ಜನಸಂಖ್ಯೆ ಹಾಗೂ ಭೂಭಾಗಗಳನ್ನು ಹೋಲಿಸಿ ದಾಗ, ಈ ವಿಷಯ ಮತ್ತಷ್ಟು ಸ್ಪಷ್ಟವಾಗುತ್ತದೆ. ರಷ್ಯಾ ದೇಶದ ಭೂಭಾಗವು, ಭಾರತದ ಭೂಭಾಗಕ್ಕಿಂತ ಸುಮಾರು

7ರಷ್ಟು ಹೆಚ್ಚಾಗಿದ್ದು, ಆದರ ಜನಸಂಖ್ಯೆಯು ಅರ್ಧದಷ್ಟು ಮಾತ್ರ ಇದೆ (1971ರ ಪ್ರಕಾರ 265 ದಶಲಕ್ಷಗಳು). ಪ್ರಪಂಚದಲ್ಲಿ, ಭಾರತದ ಆದಾಯ, ಭೂಭಾಗ ಮತ್ತು ಜನಸಂಖ್ಯೆಯ ಪಾಲನ್ನು ಪಟ್ಟಿ (2)ರಲ್ಲಿ ಕಾಣಬಹುದು.

**ಪಟ್ಟಿ–2**

**ಪ್ರಪಂಚದಲ್ಲಿ ಭಾರತದ ಭೂಭಾಗ, ಜನಸಂಖ್ಯೆ ಮತ್ತು ಆದಾಯದ ಪಾಲು**

1. ಶೇ. 14.6 ಭಾಗದಷ್ಟು ಜನಸಂಖ್ಯೆ.
2. ಶೇ. 2.4 ಭಾಗದಷ್ಟು ಭೂಭಾಗ.
3. ಶೇ. 1.5 ಭಾಗದಷ್ಟು ಆದಾಯ.

ಮೂಲ : The Journal of Family Welfare.
December 1971 (ಪುಟ-22)

## ಜನಸಂಖ್ಯಾ ಬೆಳವಣಿಗೆ

ಪ್ರಪಂಚದ ಜನಸಂಖ್ಯೆಯು 1850 ರಲ್ಲಿ ಕೇವಲ 1.24 ಬಿಲಿಯನ್‌ಗಳಾಗಿದ್ದು, ಈಗ ಅದು ಸುಮಾರು 4 ಬಿಲಿಯನ್‌ಗಳಾಗಿದೆಯೆಂದು ತಿಳಿದು ಬಂದಿದೆ. ಅಂದರೆ ಸುಮಾರು ಒಂದು ಶತಕದಲ್ಲಿಯೇ ಜನಸಂಖ್ಯೆ ದ್ವಿಗುಣಗೊಂಡಿದೆ. ಈ ರೀತಿ ಜನಸಂಖ್ಯೆ ವೇಗವಾಗಿ ಬೆಳೆಯುತ್ತಿರುವುದು ತುಂಬಾ ಕುತೂಹಲಕಾರಿಯೂ ಅಂತೆಯೇ ಭೀಕರ ಪರಿಸ್ಥಿತಿಗೆ ಕಾರಣವೂ ಆಗಿದೆ. ವಿಶ್ವ ಜನಸಂಖ್ಯಾ ಬೆಳವಣಿಗೆಯನ್ನು ಪಟ್ಟಿ (3) ತೋರಿಸುತ್ತದೆ.

ಪಟ್ಟಿ–3

| ವರ್ಷ | ಜನಸಂಖ್ಯೆ (*ಬಿಲಿಯನ್‌ಗಳಲ್ಲಿ) |
|---|---|
| 1650 | 0.55 |
| 1750 | 0.75 |
| 1850 | 1.24 |
| 1900 | 1.65 |
| 1950 | 2.52 |
| 1960 | 3.01 |
| 1970 | 3.63 |
| 1975* | 3.97 |

*ಒಂದು ಬಿಲಿಯನ್ = 1000 ದಶಲಕ್ಷ

ಮೂಲ : Bhan, R. K. : "A Hand Book of statistics on Population Education"
The Pathfinder Fund
G–16, South Extension II
New Delhi (Table–I)

ಈಗಿನ ಅಂದಾಜುಗಳ ಪ್ರಕಾರ, ವಿಶ್ವದ ಜನಸಂಖ್ಯೆಯು ಇನ್ನು 30–35 ವರ್ಷಗಳಲ್ಲಿಯೇ ದ್ವಿಗುಣವಾಗುತ್ತದೆಂದು ತಿಳಿದುಬಂದಿದೆ. ಈ ರೀತಿ ಜನಸಂಖ್ಯೆ ಬೆಳದದ್ದೇ ಆದರೆ, ಪ್ರಪಂಚದ ಜನಸಂಖ್ಯೆಯು ಕ್ರಿ.ಶ. 2000ದ ಹೊತ್ತಿಗೆ 7 ಬಿಲಿಯನ್ ದಾಟುವುದರಲ್ಲಿ ಆಶ್ಚರ್ಯವೇನಿಲ್ಲ.

## ಭಾರತದ ಸ್ಥಾನ

ಈ ಶತಮಾನದ ಪ್ರಾರಂಭದಲ್ಲಿ ಭಾರತದ ಜನಸಂಖ್ಯೆ ಕೇವಲ 236 ದಶಲಕ್ಷಗಳಾಗಿದ್ದು (1901ರಲ್ಲಿ), 1931ರಲ್ಲಿ

279 ದಶಲಕ್ಷಗಳಾಗಿತ್ತು. 1921ನೆಯ ಇಸವಿಯನ್ನು ಭಾರತದ ಜನಸಂಖ್ಯಾ ಬೆಳವಣಿಗೆಯ ದೃಷ್ಟಿಯಿಂದ "ಮಹತ್ತರ ವರ್ಷ" ವೆಂದು ಕರೆಯಲಾಗಿದೆ. ಈ ವರ್ಷ ಜನಸಂಖ್ಯಾ ಬೆಳವಣಿಗೆಯನ್ನು ಎರಡು ಮುಖ್ಯ ಭಾಗಗಳಾಗಿ ವಿಭಜಿಸಿತು. 1921 ನೆಯ ಇಸವಿಯವರೆಗೆ ನಿಧಾನವಾಗಿ ಬೆಳೆಯುತ್ತಿದ್ದ ಜನಸಂಖ್ಯೆಯು, ಕ್ರಮೇಣ ಸ್ಫೋಟಗೊಳ್ಳಲು ಪ್ರಾರಂಭಿಸಿತು. ಪಟ್ಟಿ (4) ರಲ್ಲಿ ಕಂಡುಬರುವಂತೆ ಶೇಕಡಾ ಹೆಚ್ಚುವರಿಯು 11 ರಿಂದ (1931ರಲ್ಲಿ) 24.5ಗೆ (1971ರಲ್ಲಿ) ಏರಿತು.

ಸ್ವಾತಂತ್ರ್ಯ ಬಂದನಂತರ ಹೆಚ್ಚಿದ ಆರೋಗ್ಯ ಸೌಲಭ್ಯಗಳಿಂದಾಗಿ ಭಾರತೀಯನ ಸರಾಸರಿ ವಯಸ್ಸು ಹೆಚ್ಚಿ, ಮಕ್ಕಳ ಅಕಾಲಿಕ ಮರಣ ಸಂಖ್ಯೆ ಕಡಿಮೆಯಾಯಿತು. ಇದರ ಫಲವಾಗಿ ಜನನ ದರ ಹಾಗೂ ಮರಣ ದರಗಳ ನಡುವಿನ ಅಂತರ ಹೆಚ್ಚಾಗಿ (ನಕ್ಷೆ–1) ಜನಸಂಖ್ಯೆ ತೀವ್ರವಾಗಿ ಬೆಳೆಯಲು ಕಾರಣವಾಯಿತು. ಇದರಿಂದಾಗಿ ಭಾರತದ ಜನಸಂಖ್ಯೆಯು 1961ರಲ್ಲಿ 439 ದಶಲಕ್ಷಕ್ಕೆ ಏರಿತು ಪಟ್ಟಿ (4). 1971 ನೆಯ ಜನಗಣತಿಯ ಪ್ರಕಾರ ಅದು 547 ದಶಲಕ್ಷ ತಲುಪಿತು. ಈಗಿನ ಲೆಕ್ಕಾಚಾರದ ಪ್ರಕಾರ ನಮ್ಮ ಜನಸಂಖ್ಯೆ 610 ದಶಲಕ್ಷಗಳಾಗಿದೆಯೆಂದು ಅಂದಾಜು ಮಾಡಲಾಗಿದೆ.

ಜನಸಂಖ್ಯಾ ತಜ್ಞರ ಪ್ರಕಾರ, ಭಾರತದ ಜನಸಂಖ್ಯೆ ಇದೇ ರೀತಿ ಬೆಳೆದರೆ, ಕ್ರಿ.ಶ. 2000ರಲ್ಲಿ 1,235 ದಶಲಕ್ಷ ತಲುಪಿ, ವಿಶ್ವದಲ್ಲೇ ಹೆಚ್ಚು ಜನಸಂಖ್ಯೆಯುಳ್ಳ ರಾಷ್ಟ್ರಗಳ ಪಟ್ಟಿಯಲ್ಲಿ "ಪ್ರಥಮ ಸ್ಥಾನ" ಹೊಂದುವುದೆಂದು ನಂಬಲಾಗಿದೆ. ಈಗ ಸುಮಾರು 850 ದಶಲಕ್ಷ ಜನರಿರುವ ಚೈನಾ ದೇಶವು ಪ್ರಥಮ ಸ್ಥಾನವನ್ನು ಹೊಂದಿದೆ.

"ಭಾರತದ ಜನನ ಹಾಗೂ ಮರಣ ದರಗಳು"




ಚಿತ್ರ 2. "ಹೆಚ್ಚುತ್ತಿರುವ ಜನಸಂಖ್ಯಾ ಬೆಳವಣಿಗೆ"

ಅಳತೆ :— X – ಅಕ್ಷ; 1 ಸೆಂಟಿಮೀಟರ್ — 5 ವರ್ಷ

Y – ಅಕ್ಷ; 1 ಸೆಂಟಿಮೀಟರ್—5 ಪ್ರಮಾಣ

ಪಟ್ಟಿ-4

ಜನಸಂಖ್ಯಾ ಬೆಳವಣಿಗೆ 1901 ರ ನಂತರ

| ಜನ ಗಣತಿ ವರ್ಷ | ಜನಸಂಖ್ಯೆ (ದಶಲಕ್ಷಗಳಲ್ಲಿ) | ಶೇ. ಹೆಚ್ಚುವರಿ |
|---|---|---|
| 1901 | 238.3 | — |
| 1911 | 252.0 | + 5.8 |
| 1921 | 251.2 | – 0.3 |
| 1931 | 278.8 | +11.0 |
| 1941 | 318.5 | +14.2 |
| 1951 | 360.9 | +13.3 |
| 1961 | 439.1 | +21.6 |
| 1971 | 547.3 | +24.5 |

ಮೂಲ :—

Bhan, R. K. : "A Hand Book on Population Education" Pathfinder Fund, G-16, South Extension II, New-Delhi. (1973) (ಪಟ್ಟಿ-5)

ಕರ್ನಾಟಕದ ಜನಸಂಖ್ಯೆ

ಭಾರತದಲ್ಲಿನ ಜನಸಂಖ್ಯಾ ಪರಿಸ್ಥಿತಿಯನ್ನು, ಅದರ ರಾಜ್ಯಗಳಲ್ಲೊಂದಾದ ಕರ್ನಾಟಕದಲ್ಲಿಯೂ ಕಾಣಬಹುದು. 1901 ರಲ್ಲಿ 13.1 ದಶಲಕ್ಷ ಜನಸಂಖ್ಯೆಯಿದ್ದ ಕರ್ನಾಟಕ ರಾಜ್ಯದಲ್ಲಿ, ಈಗ 29.3 ದಶಲಕ್ಷಗಳಾಗಿದೆ. ಪಟ್ಟಿ (5)ರಲ್ಲಿ ಕಂಡು ಬರುವಂತೆ ಶೇಕಡಾ ಹೆಚ್ಚುವರಿಯೂ ಸಹ 1931 ರಿಂದ ಕ್ರಮವಾಗಿ ಹೆಚ್ಚುತ್ತಲೇ ಇದೆ.

ಪಟ್ಟಿ—5

ಕರ್ನಾಟಕದ ಜನಸಂಖ್ಯೆ

| ಜನಗಣತಿಯ ವರ್ಷ | ಜನ ಸಂಖ್ಯೆ | ಶೇಕಡಾವಾರು ಹೆಚ್ಚುವರಿ |
|---|---|---|
| 1901 | 13,054,754 | — |
| 1911 | 13,525,251 | +3.60 |
| 1921 | 13,377,599 | −1.09 |
| 1931 | 14,632,992 | +9.38 |
| 1941 | 16,255,368 | +11.09 |
| 1951 | 19,401 956 | +19.36 |
| 1961 | 23,586,772 | +21.57 |
| 1971 | 29,299,014 | +22.44 |

ಮೂಲ :—ನಾರಾಯಣಮ್ಮ ಬಿ : "ಜನಪ್ರಳಯ", ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (ಪುಟ-93).

***ಜನಸಂಖ್ಯಾಸ್ಫೋಟನಕ್ಕೆ ಕಾರಣಗಳೇನು ?**

ಜನಸಂಖ್ಯಾ ಸಮಸ್ಯೆಯ ಬಗ್ಗೆ ತಜ್ಞರು ಮುಖ್ಯವಾಗಿ ಎರಡು ರೀತಿಯ ದೃಷ್ಟಿಕೋನಗಳನ್ನು ಮುಂದಿಟ್ಟಿದ್ದಾರೆ. ಇದರಲ್ಲಿ ಒಂದು ಗುಂಪಿನ ತಜ್ಞರು ಬಡತನವೇ ಜನಸಂಖ್ಯಾ ಸಮಸ್ಯೆಗೆ ಕಾರಣವೆಂದೂ, ಆದುದರಿಂದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯೇ ಜನಸಂಖ್ಯಾಸಮಸ್ಯೆಗೆ ಪರಿಹಾರ ವೆಂದೂ ವಾದಿಸುತ್ತಾರೆ. ಮತ್ತೊಂದು ಗುಂಪಿನ ತಜ್ಞರು. ಜನಸಂಖ್ಯಾ ಸಮಸ್ಯೆಯು ದೇಶದ ಎಲ್ಲಾ ಸಮಸ್ಯೆಗಳಿಗೂ ಕಾರಣವೆಂದೂ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಗಾಗಿ ಜನಸಂಖ್ಯಾನಿಯಂತ್ರಣ ಅಗತ್ಯವೆಂದೂ ವಾದಿಸುತ್ತಾರೆ.

ನಮ್ಮಲ್ಲಿನ ಜನಸಂಖ್ಯಾ ಸಮಸ್ಯೆಯ ಪರಿಹಾರಕ್ಕಾಗಿ ಎರಡೂ ಗುಂಪಿನ ತಜ್ಞರು ಮುಂದಿಟ್ಟಿರುವ ಕೆಲವು ಸೂಕ್ತ ಸಲಹೆಗಳನ್ನು ತೆಗೆದುಕೊಂಡಲ್ಲಿ ಉತ್ತಮ. ಈ ರೀತಿ ಮಾಡುವುದಕ್ಕೆ ಮೊದಲಾಗಿ ನಾವು ಜನಸಂಖ್ಯಾ ಸ್ಫೋಟನಕ್ಕೆ ಕಾರಣಗಳೇನೆಂದು ತಿಳಿದು ಕೊಳ್ಳುವುದು ಅತ್ಯವಶ್ಯಕ. ಕಾರಣ ಗಳನ್ನೆಲ್ಲಾ ಕೂಲಂಕುಶವಾಗಿ ಪರಿಶೀಲಿಸಿ, ನಂತರ ದೇಶದ ಪರಿಸ್ಥಿತಿಗೆ ಅನುಕೂಲವಾಗುವ ಎಲ್ಲಾ ಕಾರ್ಯ ಚಟುವಟಿಕೆ ಗಳನ್ನೂ ತೆಗೆದುಕೊಳ್ಳಬೇಕು.

* * * *

1. ಭಾರತ ದೇಶವು ಮುಂದುವರಿಯುತ್ತಿರುವ ರಾಷ್ಟ್ರಗಳ ಗುಂಪಿಗೆ ಸೇರಿದ್ದು, ಉತ್ತಮ ಆರೋಗ್ಯ ಸೌಕರ್ಯ ಗಳನ್ನು ಎಲ್ಲಾ ಜನರಿಗೂ ಒದಗಿಸಲು ಯತ್ನಿಸುತ್ತಿದೆ. ಸ್ವಾತಂತ್ರ್ಯ ಬಂದನಂತರ ನಮ್ಮ ಸರ್ಕಾರವು ಸಾಕಷ್ಟು ಪ್ರಯತ್ನಮಾಡಿ, ಹಳ್ಳಿಗಳಲ್ಲಿರುವ ಜನರಿಗೂ ಆರೋಗ್ಯ ಸೌಲಭ್ಯಗಳನ್ನು ಮಾಡಿಕೊಟ್ಟಿದೆ. ಉತ್ತಮ ಹಾಗೂ ಸುಲಭವಾಗಿ ದೊರಕುತ್ತಿರುವ ಔಷಧಿ ಸೌಲಭ್ಯಗಳಿಂದಾಗಿ ಭಾರತೀಯನ ಸರಾಸರಿ ವಯಸ್ಸು 32 ವರ್ಷಗಳಿಂದ (1941 ರಲ್ಲಿ) 53 ವರ್ಷಗಳಿಗೆ (1971 ರಲ್ಲಿ) ಏರಿದೆ. ಇದ ರಿಂದಾಗಿ ಅಕಾಲಿಕ ಮರಣಕ್ಕೆ ತುತ್ತಾಗುತ್ತಿದ್ದ ತಂದೆ-ತಾಯಿ ಯರು ಹೆಚ್ಚುಕಾಲ ಬದುಕುತ್ತಿದ್ದಾರೆ. ದಾಂಪತ್ಯ ಜೀವನ ನಡೆಸುವಕಾಲ ಹೆಚ್ಚಿ, ಗರಿಷ್ಠ ಮಕ್ಕಳನ್ನು ಪಡೆಯುವ ಸಂಭವವೂ ಹೆಚ್ಚಿದೆ. ಭಾರತದಲ್ಲಿನ ಗಂಡಸರ ಹಾಗೂ ಸ್ತ್ರೀಯರ ಆಯುಷ್ಯ ನಿರೀಕ್ಷೆ ಪಟ್ಟಿ (6)ರಲ್ಲಿ ಕಾಣಬಹುದು.

ಪಟ್ಟಿ–6
ಭಾರತದಲ್ಲಿ ಆಯುಷ್ಯ ನಿರೀಕ್ಷೆ (ವರ್ಷಗಳಲ್ಲಿ)

| ವರ್ಷ | ಆಯುಷ್ಯ ನಿರೀಕ್ಷೆ (ವರ್ಷಗಳಲ್ಲಿ) ಗಂಡಸರು | ಹೆಂಗಸರು |
|---|---|---|
| 1901 — 1910 | 22·59 | 23·31 |
| 1911 — 1920 | 19·42 | 20·91 |
| 1921 — 1930 | 26·91 | 26·36 |
| 1931 — 1940 | 32·09 | 31·37 |
| 1941 — 1950 | 32·50 | 31·70 |
| 1951 — 1960 | 41·90 | 40·60 |
| 1961 — 1965 | 48·70 | 47·40 |
| 1966 — 1970 | 53·20 | 51·90 |

ಮೂಲ :—

Bhan, R. K.: "A Hand Book of Statistics on Population Education" The Path finder Fund, G - 16, South Extension II. New Delhi. (Table–14)

2. ಎರಡನೆಯ ಮುಖ್ಯ ಕಾರಣವೆಂದರೆ, ಕಡಿಮೆಯಾಗುತ್ತಿರುವ ಮಕ್ಕಳ ಅಕಾಲಿಕ ಮರಣ. ಕೆಲವು ಮಕ್ಕಳು ಒಂದು ವರ್ಷ ತಲುಪುವುದರೊಳಗಾಗಿ ಸಾವನ್ನಪ್ಪುತ್ತಾರೆ. 1901 ರಲ್ಲಿ ಜನಿಸಿದ ಪ್ರತಿ ಸಾವಿರ ಮಕ್ಕಳಲ್ಲಿ ಒಂದು ವರ್ಷ ತಲುಪುವುದರೊಳಗಾಗಿ ಸುಮಾರು 200 ಮಕ್ಕಳು ಸಾಯುತ್ತಿದ್ದರು. ಈಗ ಈ ಅಕಾಲಿಕ ಮರಣ ದರ 113 ಕ್ಕೆ (1971 ರಲ್ಲಿ) ಇಳಿದಿದೆ. ಇದು ಆರೋಗ್ಯದ ದೃಷ್ಟಿಯಲ್ಲಿ ತುಂಬಾ ಗಮನಾರ್ಹ ಸಾಧನೆ.

ಪಟ್ಟಿ–7

## ಭಾರತದಲ್ಲಿ ಹುಟ್ಟಿದ ಶಿಶುಗಳ ಅಕಾಲಿಕ ಮರಣ

| ವರ್ಷ | ಸಾವಿನ ಸಂಖ್ಯೆ (ಪ್ರತಿ ಸಾವಿರ ಜನನಕ್ಕೆ) | ವರ್ಷ | ಸಾವಿನ ಸಂಖ್ಯೆ (ಪ್ರತಿಸಾವಿರ ಜನನಕ್ಕೆ) |
|---|---|---|---|
| 1911 | 205 | 1951 | 133 |
| 1921 | 198 | 1961 | 109 |
| 1931 | 179 | 1971 | 113 |
| 1941 | 158 | | |

ಮೂಲ :- ಹಂದೆ, ಕೆ.ಆರ್. : "ಜನಸಂಖ್ಯಾ ಶಿಕ್ಷಣದ ರೂಪರೇಷಗಳು", ಮಣಿಪಾಲ ಕಾಲೇಜ್ ಆಫ್ ಎಡ್ಯುಕೇಷನ್, ಉಡ್ಪಿ, ದಕ್ಷಿಣ ಕನ್ನಡ (ಪುಟ - 17)

3. ಜನನ ದರ ಹಾಗೂ ಮರಣ ದರಗಳ ನಡುವಿನ ಅಂತರ ಬಹಳಷ್ಟು ಹೆಚ್ಚಿರುವುದು, ಜನ ಸಂಖ್ಯಾ ಸ್ಫೋಟನಕ್ಕೆ ಒಂದು ಮುಖ್ಯ ಕಾರಣ. ಜನನ ದರ ಹಾಗೂ ಮರಣ ದರ ಗಳೆರಡೂ ಕಡಿಮೆಯಾಗಿವೆ. ಆದರೆ, ಮರಣ ದರ ಜನನ ದರಕ್ಕಿಂತಲೂ ಬಹಳಷ್ಟು ಕಡಿಮೆಯಾಗಿದೆ. 1921 ನೆಯ ಇಸವಿಯಲ್ಲಿ ಜನನ ಹಾಗೂ ಮರಣ ದರಗಳ ನಡುವಿನ ಅಂತರ ಪ್ರತಿ ಸಾವಿರಕ್ಕೆ 0.9 ಮಾತ್ರವಿದ್ದು, ಅದು ಈಗ (1971ರಲ್ಲಿ) 22 ಕ್ಕೆ ಏರಿದೆ. ಭಾರತದಲ್ಲಿನ ಜನನ ಹಾಗೂ ಮರಣ ದರಗಳನ್ನು ಪಟ್ಟಿ (8) ರಲ್ಲಿ ಕಾಣಬಹುದು.

ಈ ಮೇಲಿನ ಕಾರಣಗಳ ಜೊತೆಗೆ, ನಮ್ಮಲ್ಲಿನ ಹವಾಮಾನ, ಸ್ತ್ರೀಯರಲ್ಲಿರುವ ಹೆಚ್ಚು ಮಕ್ಕಳನ್ನು ಪಡೆಯುವ ಶಕ್ತಿ, ಬಾಲ್ಯ ವಿವಾಹ ಪದ್ಧತಿ, ದೊಡ್ಡ ಕುಟುಂಬಕ್ಕಿರುವ ಒಲವು, ಮಹಿಳೆಯರ

ಪಟ್ಟಿ–8

ಜನನ ಹಾಗೂ ಮರಣ ದರಗಳು

| ವರ್ಷ | ಜನನ ದರ | ಮರಣ ದರ | ಬೆಳವಣಿಗೆ ದರ |
|---|---|---|---|
| 1901 | 45·8 | 44·4 | 1·4 |
| 1911 | 49·2 | 42·6 | 6·6 |
| 1921 | 48·1 | 47·2 | 0·9 |
| 1931 | 46·4 | 36·3 | 10·1 |
| 1941 | 45·2 | 31·2 | 14·0 |
| 1951 | 39·9 | 27·4 | 12·5 |
| 1961 | 41·7 | 22·8 | 18·9 |
| 1971 | 37·2 | 15·1 | 22·1 |

ಮೂಲ :—Family Welfare Planning in India, Year Book 1972–73, Govt. of India Ministry of Health & F. P., Dept. of Family Planning, New-Delhi, (ಪುಟ–29)

ಅನಕ್ಷರಸ್ಥತೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳೂ ಸಹ ಭಾರತದಲ್ಲಿ ಜನಸಂಖ್ಯೆಯು ಸ್ಫೋಟಗೊಳ್ಳಲು ಕಾರಣಗಳಾಗಿವೆ.

**ನಮ್ಮಲ್ಲಿ ಎಷ್ಟು ಜನರಿಗೆ ಆಹಾರ ಸಿಗುತ್ತಿದೆ ?**

ಪ್ರತಿಯೊಬ್ಬ ಮಾನವನಿಗೂ ಗಾಳಿ, ಬೆಳಕು ಎಷ್ಟು ಅಗತ್ಯವೋ, ಆಹಾರವೂ ಸಹ ಅಷ್ಟೇ ಅಗತ್ಯ. ಎಲ್ಲರಿಗೂ ಆಹಾರ ದೊರಕುವಂತೆ ಮಾಡಲು, ನಮ್ಮಲ್ಲಿಯೂ ಸಹ

ಸಾಕಷ್ಟು ಪ್ರಯತ್ನಗಳನ್ನು ಮಾಡಲಾಗಿದೆ. ಆಹಾರದ ಉತ್ಪಾದನೆಯು 55 ದಶಲಕ್ಷ ಟನ್‌ಗಳಿಂದ (1950-51), ಸುಮಾರು 118 ದಶಲಕ್ಷ ಟನ್‌ಗಳಿಗೆ (1976) ಏರಿದೆ. ಭಾರತದ ರೈತರು ಇತ್ತೀಚಿಗೆ ಹೆಚ್ಚಾಗಿ ಬಳಸುತ್ತಿರುವ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳೂ ಹಾಗೂ ಉತ್ತಮ ವ್ಯವಸಾಯ ಕ್ರಮಗಳೇ, ಆಹಾರದ ಉತ್ಪಾದನೆಯು ಹೆಚ್ಚಾಗಲು ಕಾರಣಗಳಾಗಿವೆ.

ಪಟ್ಟಿ–9

ಭಾರತದ ಆಹಾರ ಉತ್ಪಾದನೆ

| ವರ್ಷ | ಒಟ್ಟು ಆಹಾರ ಉತ್ಪಾದನೆ (ದಶಲಕ್ಷ ಟನ್‌ಗಳಲ್ಲಿ) |
|---|---|
| 1950-51 | 55.05 |
| 1960-61 | 82.21 |
| 1965-66 | 72.35 |
| 1966-67 | 74.23 |
| 1967-68 | 95.05 |
| 1968-69 | 94.01 |
| 1969-70 | 99,50 |
| 1970-71 | 107.81 |

ಮೂಲ :—Economic Research Bureau–"Seeds of Hope"
The Economic Times (Annual 1972),
Bennett Coleman & Co. Ltd.
P.B. 213, Bombay
(ಪುಟ-41)

ಆಹಾರ ಉತ್ಪಾದನೆ ಎರಡರಷ್ಟು ಹೆಚ್ಚಾಗಿದ್ದರೂ, ನಮ್ಮ ಒಟ್ಟು ಜನಸಂಖ್ಯೆಯಲ್ಲಿ ಶೇ. 40 ಭಾಗದಷ್ಟು ಜನರಿಗೆ ಕನಿಷ್ಠ ಆಹಾರ ದೊರಕುತ್ತಿಲ್ಲವೆಂದು ಅಂದಾಜು ಅಂಕಿ-ಅಂಶ ಗಳು ಖಚಿತಪಡಿಸಿವೆ. ಇದರ ಪ್ರಕಾರ ಸುಮಾರು 200 ದಶ ಲಕ್ಷಕ್ಕೂ ಹೆಚ್ಚು ಜನರು ಬಡತನದಲ್ಲಿ ನರಳುತ್ತಿದ್ದಾರೆ. ಹಾಗಾದರೆ ನಾವು ಆಹಾರ ಉತ್ಪಾದನೆಯಲ್ಲಿ ಸಾಧಿಸಿದ ಹೆಚ್ಚಳ ಏನಾಯಿತು ? ಎಂಬ ಪ್ರಶ್ನೆ ತಲೆದೋರುವುದು ಸಹಜ. ಆಹಾರ ಉತ್ಪಾದನೆ ದ್ವಿಗುಣವಾಗುವ ಸಮಯದಲ್ಲೇ, ಜನ ಸಂಖ್ಯೆಯೂ ದ್ವಿಗುಣಗೊಂಡು ಆಹಾರ ಅಭಾವ ಸಮಸ್ಯೆಯು ಹಾಗೆಯೇ ಉಳಿಯಲು ಕಾರಣವಾಗಿದೆ. ಅಂದರೆ, ಜನಸಂಖ್ಯಾ ಸ್ಫೋಟನೆಯಿಂದಾಗಿ ಹೆಚ್ಚುಹೆಚ್ಚು ಜನ ಬಡತನದ ಗುಂಪಿಗೆ ಸೇರಿ ಹಸಿವಿನಿಂದ ನರಳುತ್ತಿದ್ದಾರೆ. ಪ್ರತಿವರ್ಷ ಹೆಚ್ಚುತ್ತಿರುವ 13 ದಶಲಕ್ಷ ಜನಸಂಖ್ಯೆಗೆ ಪೂರ್ಣ ಆಹಾರ ಒದಗಿಸಬೇಕಾದರೆ ನಮ್ಮ ವಾರ್ಷಿಕ ಆಹಾರ ಉತ್ಪಾದನೆ ಕಡೇ ಪಕ್ಷ 12.5 ದಶಲಕ್ಷ ಕ್ವಿಂಟಾಲ್‌ಗಳಷ್ಟು ಹೆಚ್ಚಿಸಬೇಕೆಂದು ಅಂದಾಜು ಮಾಡಲಾಗಿದೆ. ಇದರ ಜೊತೆಗೆ, ನಮ್ಮ ಈಗಿನ ಆಹಾರ ಸಮಸ್ಯೆಯನ್ನು ನಿವಾರಿಸಲು ಈಗಿರುವ ಆಹಾರ ಉತ್ಪಾದನೆಯನ್ನು ಎರಡರಷ್ಟು ಹೆಚ್ಚಿಸ ಬೇಕಾಗುತ್ತದೆ.

ಒಂದೆಡೆ ಆಹಾರದ ಅಭಾವ ಸಮಸ್ಯೆಯಾದರೆ, ಮತ್ತೊಂದೆಡೆ ನಾವು ತೆಗೆದುಕೊಳ್ಳುತ್ತಿರುವ ಆಹಾರದಲ್ಲಿ ಪೌಷ್ಠಿಕಾಂಶದ ಕೊರತೆ ಸಮಸ್ಯೆಯಾಗಿದೆ. ಹೆಚ್ಚಿದ ಆಹಾರ ಉತ್ಪಾದನೆಯಿಂದಾಗಿ ಹೆಚ್ಚುಹೆಚ್ಚು ಜನರಿಗೆ ಆಹಾರ ದೊರಕು ತ್ತಿರುವುದೇನೋ ನಿಜ. ಆದರೆ ಪ್ರತಿವ್ಯಕ್ತಿಗೆ ದೊರಕಬೇಕಾದ

ಭಾರತದಲ್ಲಿ ಕಡಿಮೆಯಾಗುತ್ತಿರುವ ಮರಣ ದರ




ಚಿತ್ರ 3

ಅಳತೆ: X – ಅಕ್ಷ; 1 ಸೆಂಟಿಮಿಟರ್ — 5 ವರ್ಷ Y – ಅಕ್ಷ; 1 ಸೆಂಟಿಮಿಟರ್ — 5 ಪ್ರಮಾಣ

ಸರಾಸರಿ ಆಹಾರದ ಪೌಷ್ಠಿಕಾಂಶಗಳು ಪೂರ್ಣವಾಗಿ ದೊರಕು ತ್ತಿಲ್ಲ. ರಾಷ್ಟ್ರೀಯ ಪೌಷ್ಠಿಕಾಂಶ ಸಂಸ್ಥೆಯ ಹೇಳಿಕೆಯ ಪ್ರಕಾರ, ಭಾರತೀಯನು ತೆಗೆದುಕೊಳ್ಳುತ್ತಿರುವ ಆಹಾರದಲ್ಲಿ ಪಿಷ್ಠದ ಅಂಶಬಿಟ್ಟು ಉಳಿದೆಲ್ಲಾ ಅಂಶಗಳೂ ಕಡಿಮೆ ಇದೆ ಎಂದು ತಿಳಿದು ಬರುತ್ತದೆ.

ಈ ವಿಷಯವನ್ನು ಪಟ್ಟಿ 10ರಲ್ಲಿ ಅಂಕಿ ಅಂಶಗಳು ಸ್ಪಷ್ಟೀಕರಿಸುತ್ತವೆ.

**ನಾವೆಷ್ಟು ಆರೋಗ್ಯವಂತರು ?**

ಪ್ರತಿ ದೇಶದ ಪ್ರಗತಿಯನ್ನು ಅಲ್ಲಿನ ಜನರ ಆರೋಗ್ಯ ಮಟ್ಟದಿಂದ ತಿಳಿಯಕೊಳ್ಳಬಹುದು. ಯಾವ ದೇಶದಲ್ಲಿ ಮರಣ ದರ ಕಡಿಮೆಯಿದೆಯೋ, ಅದು ಆರೋಗ್ಯ ಮತ್ತು ಜೀವನ ಮಟ್ಟದ ದೃಷ್ಟಿಯಿಂದ ಮುಂದುವರಿದಿದೆಯೆಂದು ಹೇಳ ಬಹುದು. ಭಾರತದೇಶದಲ್ಲೂ ಸಹ 1931ರ ನಂತರ ಮರಣ ದರ (ನಕ್ಷೆ-2) ಕ್ರಮೇಣ ಕಡಮೆಯಾಗುತ್ತಾ ಬರುತ್ತಿದೆ. ಇದಕ್ಕೆ ಮುಖ್ಯ ಕಾರಣವೆಂದರೆ, ನಮ್ಮಲ್ಲಿದ್ದ ಸಾಂಕ್ರಾಮಿಕ ರೋಗ ಗಳಾದ ಮಲೇರಿಯಾ, ಪ್ಲೇಗ್, ಸಿಡುಬು, ವಿಷಮ ಶೀತಜ್ವರ, ಕ್ಷಯ ಮುಂತಾದವುಗಳನ್ನು ಬಹಳಷ್ಟು ನಿಯಂತ್ರಿಸಿರುವುದು. ಒಂದು ವೇಳೆ ಈಗ ಸಾಂಕ್ರಮಿಕ ರೋಗಗಳು ಬಂದರೂ, ಅವುಗಳು ತೀವ್ರವಾಗಿ ಹರಡದಂತೆ ತಡೆಗಟ್ಟಲು ಮತ್ತು ನಿವಾರಿಸಲು ಸಾಕಷ್ಟು ಉತ್ತಮ ಔಷಧ ಸೌಲಭ್ಯಗಳನ್ನು ಒದಗಿಸುವ ಸ್ಥಿತಿಯಲ್ಲಿ ನಾವಿದ್ದೇವೆ. ಈ ದೃಷ್ಟಿಯಿಂದ ನೋಡಿದಲ್ಲಿ ಸ್ವಾತಂತ್ರ್ಯ ಬಂದಮೇಲೆ ಆರೋಗ್ಯ ವಿಭಾಗದಲ್ಲಿ ನಾವು ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದೇವೆ.

ಪಟ್ಟಿ–10

## ಭಾರತದಲ್ಲಿ ತೆಗೆದುಕೊಳ್ಳಬೇಕಾದ, ತೆಗೆದುಕೊಳ್ಳುತ್ತಿರುವ ಆಹಾರದ ಪ್ರಮಾಣ

| ಕ್ರಮ ಸಂಖ್ಯೆ | ಆಹಾರ ಪದಾರ್ಥಗಳು | ತೆಗೆದುಕೊಳ್ಳಬೇಕಾದ ಪ್ರಮಾಣ (ಗ್ರಾಂಗಳಲ್ಲಿ) | ತೆಗೆದುಕೊಳ್ಳುತ್ತಿರುವ ಪ್ರಮಾಣ (ಗ್ರಾಂಗಳಲ್ಲಿ) |
|---|---|---|---|
| 1. | ಧಾನ್ಯಗಳು(ಅಕ್ಕಿ, ಗೋಧಿ, ಇತರೆ) | 370 | 486 |
| 2. | ದ್ವಿದಳ ಧಾನ್ಯಗಳು | 70 | 41 |
| 3. | ಹಾಲು ಮತ್ತು ಹಾಲಿನ ಉತ್ಪನ್ನ | 180 | 67 |
| 4. | ಮಾಂಸ, ಮೀನು, ಮೊಟ್ಟೆ, ಇತರೆ | 35 | 13 |
| 5. | ಹಸಿರು ಸೊಪ್ಪು ಮುಂತಾದುವುಗಳು | 114 | 21 |
| 6. | ಇತರ ತರಕಾರಿಗಳು | 125 | 65 |
| 7. | ಹಣ್ಣುಗಳು | 37 | 14 |
| 8. | ತುಪ್ಪ ಮತ್ತು ಎಣ್ಣೆ | 38 | 12 |
| 9. | ಸಕ್ಕರೆ ಮತ್ತು ಬೆಲ್ಲ | 40 | 21 |

ಮೂಲ :—K. Seshagiri Rao "Over Population & Nutrition Programme" in "Dharwar District Achieves An All-Time Record"

District–Level Action Committee on Family Planning, Dharwar, (ಪುಟ-20)

## ಆರೋಗ್ಯ ಸೌಲಭ್ಯಗಳು

ನಗರ ಹಾಗೂ ಹಳ್ಳಿಯ ಜನರುಗಳಿಗೆ ಉತ್ತಮ ಹಾಗೂ ಸುಲಭ ಆರೋಗ್ಯ ಸೌಲಭ್ಯಗಳನ್ನು ಒದಗಿಸಲು ಸರ್ಕಾರವು ಸಾಕಷ್ಟು ಪ್ರಯತ್ನಗಳನ್ನು ಮಾಡಿದೆ. ಎಷ್ಟೇ ಪ್ರಯತ್ನಗಳನ್ನು ಮಾಡಿದ್ದರೂ. ಹಳ್ಳಿಯ ಜನರಿಗೆ ದೊರಕುತ್ತಿರುವ ವೈದ್ಯಕೀಯ ಸೌಲಭ್ಯಗಳು ಇನ್ನೂ ಕಡಿಮೆಯಾಗಿಯೇ ಉಳಿದಿವೆ. 1961 ನೆಯ ಜನಗಣತಿಯ ಪ್ರಕಾರ ಸರಾಸರಿ 5,900 ಜನರಿಗೆ ಒಬ್ಬ ವೈದ್ಯನಿದ್ದನು. ಆದರೆ ನಗರದಲ್ಲಿ ಪ್ರತಿ 1,400 ಜನರಿಗೆ ಒಬ್ಬ ವೈದ್ಯನಿದ್ದರೆ, ಹಳ್ಳಿಗಳಲ್ಲಿ ಪ್ರತಿ 18,000 ಜನರಿಗೆ ಒಬ್ಬ ವೈದ್ಯನಿದ್ದನು. 1972-73ರಲ್ಲಿ ವೈದ್ಯರುಗಳ ಸಂಖ್ಯೆಯು* 1,30,530ಕ್ಕೆ ಏರಿತು.

ಹೆಚ್ಚಿದ ವೈದ್ಯರುಗಳ ಸಂಖ್ಯೆಯಿಂದಾಗಿ† 1971 ರಲ್ಲಿ ಪ್ರತಿ 1,500 ನಗರವಾಸಿಗಳಿಗೆ ಹಾಗೂ ಪ್ರತಿ 12,000 ಗ್ರಾಮಾಂತರ ವಾಸಿಗಳಿಗೆ ಒಬ್ಬ ವೈದ್ಯನಿದ್ದನು. ಇದರ ಜೊತೆಗೆ ಉತ್ತಮಪಡಿಸಿರುವ ಔಷಧಿಗಳು, ತರಬೇತಿ ಪಡೆದ ಕಾರ್ಯಕರ್ತರು. ಮತ್ತು ಸುಲಭವಾಗಿ ದೊರಕುವಂತಾಗಿರುವ ಸೌಲಭ್ಯಗಳು ಆರೋಗ್ಯ ಕ್ಷೇತ್ರದ ಗಮನಾರ್ಹ ಸಾಧನೆಗಳು.

---

*INDIA—1974: Govt. of India Ministry of Information & Broadcasting (1974) (ಪುಟ–82)

†Visaria Pravin & Jain K. Anrudh: "Country Profiles—India" The Population Council, 245, Park Avenue, New York (1976) (ಪುಟ–19)

ಆರೋಗ್ಯ ಸೌಲಭ್ಯಗಳು ಎಷ್ಟೇ ಹೆಚ್ಚಿಸಿದ್ದರೂ, ಅದೇ ಸಮಯದಲ್ಲಿ ಸ್ಫೋಟಗೊಂಡಿರುವ ಜನಸಂಖ್ಯೆಯು ಅದರ ಪ್ರಗತಿಯನ್ನು ನುಂಗಿ ಹಾಕಿದೆ. ಇದರಿಂದಾಗಿ ಆರೋಗ್ಯ ಸೌಲಭ್ಯಗಳ ಮುಂದುವರಿಯುವಿಕೆ ಇನ್ನೂ ಸಾಗಬೇಕಾಗಿದೆ. ಕಡಿಮೆ ಆರೋಗ್ಯ ಸೌಲಭ್ಯಗಳಿಂದಾಗಿ ಹಾಗೂ ಅನಾರೋಗ್ಯ ವಸತಿ ಸೌಲಭ್ಯಗಳಿಂದಾಗಿ ನಮ್ಮ ಜನರ ಆರೋಗ್ಯ ಪರಿಸ್ಥಿತಿ ಮತ್ತಷ್ಟು ಕೆಡಲು ಕಾರಣವಾಗುತ್ತದೆ. ಹೊಸ ಹೊಸ ರೋಗಗಳು ಉದ್ಭವಿಸುವ ಹಾಗೂ ಹರಡುವ ಸಂಭವಗಳು ಹೆಚ್ಚಾಗುತ್ತವೆ. ಆರೋಗ್ಯ ಮತ್ತು ವಸತಿ ಸೌಲಭ್ಯಗಳ ಅಭಾವ ವಾತಾವರಣ ಕಲುಷಿತಗೊಳ್ಳಲು ಸಹಕಾರಿಯಾಗುತ್ತದೆ. ಕಲುಷಿತಗೊಂಡ ವಾತಾವರಣ ಪ್ರತಿ ವ್ಯಕ್ತಿಯ ಆರೋಗ್ಯದ ಮೇಲೂ ದುಷ್ಪರಿಣಾಮ ಬೀರುತ್ತದೆ.

## ವಿದ್ಯಾಭ್ಯಾಸ ಪ್ರಗತಿ

ದೇಶದ ಪ್ರಗತಿಯು ಮುಖ್ಯವಾಗಿ ಅಲ್ಲಿನ ವಿದ್ಯಾವಂತ ಜನರ ಮೇಲೆ ಅವಲಂಬಿಸಿದೆ. ಅದರಲ್ಲೂ ಪ್ರಜಾಪ್ರಭುತ್ವವುಳ್ಳ ನಮ್ಮ ದೇಶ ಪ್ರಗತಿ ಸಾಧಿಸಬೇಕಾದರೆ, ವಿದ್ಯಾವಂತರ ಸಂಖ್ಯೆ ಹೆಚ್ಚಿರಲೇ ಬೇಕು. ಸ್ವಾತಂತ್ರ್ಯ ಬಂದನಂತರ ವಿದ್ಯಾಭ್ಯಾಸ ಸೌಲಭ್ಯಗಳು ಮಾತ್ರ ಹೆಚ್ಚದೆ, ಶಾಲೆಗೆ ಹೋಗುವ ಮಕ್ಕಳ ಪ್ರಮಾಣವೂ ಸಹ ಗಮನಾರ್ಹವಾಗಿ ಹೆಚ್ಚಿದೆ (ಪಟ್ಟಿ-11).

ಈ ಸೌಲಭ್ಯಗಳ ಜೊತೆಗೆ, ಉನ್ನತ ವಿದ್ಯಾಭ್ಯಾಸಕ್ಕೂ ಸಹ ನಮ್ಮ ಸರ್ಕಾರ ಹೆಚ್ಚು ಪ್ರೋತ್ಸಾಹ ಮತ್ತು ಸೌಲಭ್ಯಗಳನ್ನು ನೀಡುತ್ತಿದೆ. 1951 ರಲ್ಲಿ ವಿಶ್ವವಿದ್ಯಾಲಯಗಳ ಸಂಖ್ಯೆ 20 ಇದ್ದು, 1971ರಲ್ಲಿ ಅದು 88ಕ್ಕೆ ಏರಿತು. ಈ

ಪಟ್ಟಿ–11

ಭಾರತದಲ್ಲಿ ಶಾಲೆಗಳು ಹಾಗೂ ಶಾಲಗೆ ಹೋಗುವವರ ಸಂಖ್ಯೆ

| ವಿದ್ಯಾಭ್ಯಾಸ | ಶಾಲೆಗಳ ಸಂಖ್ಯೆ (ದಶ ಲಕ್ಷಗಳಲ್ಲಿ) | | ಶಾಲೆಗೆ ಹೋಗುವವರ ಶೇಕಡಾವಾರು ಪ್ರಮಾಣ | |
|---|---|---|---|---|
| | 1951 | 1971 | 1951 | 1971 |
| ಪ್ರಾಥಮಿಕ | 19·2 | 59·2 | 42·6 | 81·7 |
| ಮಾಧ್ಯಮಿಕ | 3·1 | 14·6 | 12·7 | 36·5 |
| ಪ್ರೌಢ | 1·2 | 7·4 | 5·8 | 21·0 |
| ಒಟ್ಟು | 23·5 | 81·2 | 26·0 | 54·9 |

ಮೂಲ :—ನಾರಾಯಣಮ್ಮ, ಬಿ. : "ಜನಪ್ರಳಯ", ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-18 (1976) (ಪು-188)

ವಿಶ್ವವಿದ್ಯಾಲಯುಗಳು ಪದವೀಧರ ತರಗತಿಗಳು ಮಾತ್ರವೇ ಅಲ್ಲದೆ, ಸ್ನಾತಕೋತ್ತರ ಮತ್ತು ಸಂಶೋಧನಾ ಸೌಲಭ್ಯಗಳನ್ನು ಹೊಂದಿವೆ. 1974ರಲ್ಲಿ ವಿಶ್ವವಿದ್ಯಾಲಯುಗಳ ಸಂಖ್ಯೆ 90ಕ್ಕೆ ಹೆಚ್ಚಿತು.

ಶಾಲಾ ಕಾಲೇಜುಗಳ ಸಂಖ್ಯೆ ಎರಡರಷ್ಟಕ್ಕೂ ಮಿಗಿಲಾಗಿದೆ. ಇದರ ಜೊತೆಗೆ ನಮ್ಮಲ್ಲಿ ವಿದ್ಯಾಭ್ಯಾಸಕ್ಕಾಗಿ ಬರುವ ಮಕ್ಕಳ ಸಂಖ್ಯೆಯೂ ಹೆಚ್ಚಾಗಿದೆ. ಹೆಚ್ಚು ಹೆಚ್ಚು ಮಕ್ಕಳು ವಿದ್ಯಾವಂತರಾಗಿರುವುದೇನೋ ನಿಜ, ಆದರೆ ಅದೇ ಸಮಯಕ್ಕೆ ಅನಕ್ಷರಸ್ಥರ ಸಂಖ್ಯೆಯೂ ದ್ವಿಗುಣಗೊಂಡಿರುವುದು ತುಂಬಾ ಅಸಮಾಧಾನಕರವಾದ ವಿಷಯ [ಪಟ್ಟಿ 12].

## ಪಟ್ಟಿ–12

## ಭಾರತದಲ್ಲಿನ ಅಕ್ಷರಸ್ಥರ ಹಾಗೂ ಅನಕ್ಷರಸ್ಥರ ಸಂಖ್ಯೆ

| ವಿವರಣೆ | ಜನಗಣತಿ ವರ್ಷಗಳು 1951 | | 1961 | | 1971 | |
|---|---|---|---|---|---|---|
| | ಜನಸಂಖ್ಯೆ (ದಶಲಕ್ಷಗಳಲ್ಲಿ) | ಶೇಕಡವಾರು | ಜನಸಂಖ್ಯೆ (ದಶಲಕ್ಷಗಳಲ್ಲಿ) | ಶೇಕಡವಾರು | ಜನಸಂಖ್ಯೆ ದಶಲಕ್ಷಗಳಲ್ಲಿ) | ಶೇಕಡವಾರು |
| ಅಕ್ಷರಸ್ಥರು | 60 | 16.6 | 105 | 24 | 160 | 29.3 |
| ಅನಕ್ಷರಸ್ಥರು | 301 | 83.4 | 334 | 76 | 387 | 70.7 |
| ಒಟ್ಟು | 361 | 100 | 439 | 100 | 547 | 100 |

ಮೂಲ:

Rao, K. S. Anantha Subba :
"Demographic Changes in India and its Impact on Education", Population Education Project, F. P. A. I—Bangalore Branch (Paper presented on 24th September 72) (ಪುಟ 7)

ವಿದ್ಯಾಭ್ಯಾಸ ಪ್ರಗತಿಯಲ್ಲಿ ಮತ್ತೊಂದು ಗಮನಾರ್ಹ ಅಂಶವೆಂದರೆ ಕಡ್ಡಾಯ ಹಾಗೂ ಉಚಿತ ಪ್ರಾಥಮಿಕ ಶಿಕ್ಷಣ. ಸಾಕಷ್ಟು ಸೌಲಭ್ಯಗಳು ಹಾಗೂ ಹಣ ಇದಕ್ಕಾಗಿ ಒದಗಿಸಿದ್ದರೂ, ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ಸಂಪೂರ್ಣ ಯಶಸ್ವಿಯಾಗಿಲ್ಲ. ಅಕ್ಷರಸ್ಥರ ಸಂಖ್ಯೆ ಹೆಚ್ಚಿದ್ದರೂ, ಅದು ನಗರಗಳಲ್ಲಿ ಮಾತ್ರ ಹೆಚ್ಚಿನ ಪರಿಣಾಮ ಬೀರಿದೆ. ಸ್ತ್ರೀಯರ

ಅಕ್ಷರಸ್ಥರ ಸಂಖ್ಯೆ ಇನ್ನೂ ಹೆಚ್ಚಬೇಕಾಗಿರುವ ಅಂಶವನ್ನು ಪಟ್ಟಿ–13ರಲ್ಲಿ ಕಾಣಬಹುದು.

ಪಟ್ಟಿ–13

**ಭಾರತದಲ್ಲಿ ಸಾಕ್ಷರರ ಶೇಕಡವಾರು**

| ವಿವರಣೆ | ಒಟ್ಟು ಜನರು | ಗಂಡಸರು | ಹೆಂಗಸರು |
|---|---|---|---|
| ಒಟ್ಟು ಜನಸಂಖ್ಯೆ | 29.34 | 39.51 | 18.44 |
| ಹಳ್ಳಿಯ ಜನಸಂಖ್ಯೆ | 23.60 | 33 77 | 12.92 |
| ನಗರದ ಜನಸಂಖ್ಯೆ | 52.48 | 61.55 | 41.92 |

ಮೂಲ: Rao, K. S. Anantha Subba : "Basic Statistics of Population and its Related Subjects", Paper presented at a seminar on Population Education for Secondary School Heads on 28-3—73 (ಪುಟ 7)

ನಾವು ನೀಡುತ್ತಿರುವ ವಿದ್ಯಾಭ್ಯಾಸದತ್ತ ನಮ್ಮ ಗಮನ ಹರಿಸಿದರೆ, ವಿದ್ಯಾಭ್ಯಾಸದ ಮಟ್ಟ ಸಾಕಷ್ಟು ಕಡಿಮೆಯಾಗುತ್ತಿದೆ ಎನ್ನುವುದು ಕಂಡುಬರುತ್ತದೆ. ಈ ರೀತಿಯಾಗಲು, ಹೆಚ್ಚು ಮಕ್ಕಳಿರುವ ತರಗತಿಗಳು, ವೈಯಕ್ತಿಕ ಗಮನವಿಲ್ಲದಿರುವುದು, ವಾಚನಾಲಯ ಮತ್ತು ಪ್ರಯೋಗಸೌಲಭ್ಯಗಳ ಅಭಾವ, ಹಾಗೂ ಸುವ್ಯವಸ್ಥಿತವಲ್ಲದ ಆಡಳಿತಗಳೇ

ಮುಖ್ಯ ಕಾರಣಗಳು. ಇಂತಹ ವಿದ್ಯಾಭ್ಯಾಸ ಎಷ್ಟು ನೀಡಿದರೂ ಅದರ ಫಲ ದೇಶಕ್ಕೆ ಒದಗುವುದಿಲ್ಲ. ನಮ್ಮಲ್ಲಿ ಈಗ ಕೊಡುತ್ತಿರುವ ವಿದ್ಯಾಭ್ಯಾಸ ಸಂಖ್ಯೆಯಲ್ಲಿ ಹೆಚ್ಚಿದ್ದರೂ, ಗುಣಮಟ್ಟದಲ್ಲಿ ಉತ್ತಮ ಸ್ಥಿತಿಯಲ್ಲಿಲ್ಲವೆಂದು ಹೇಳಬಹುದು.

## ನಿರುದ್ಯೋಗ ಸಮಸ್ಯೆ

ಆಹಾರ ಸಮಸ್ಯೆಯಷ್ಟೇ ಭೀಕರವಾದ ಮತ್ತೊಂದು ಸಮಸ್ಯೆಯೆಂದರೆ ನಿರುದ್ಯೋಗ ಸಮಸ್ಯೆ. ಈ ಸಮಸ್ಯೆ ನಗರಗಳಿಗೆ ಮಾತ್ರ ಸೀಮಿತವಾಗದೆ, ಹಳ್ಳಿಗಳಲ್ಲಿಯೂ ಹೆಚ್ಚುತ್ತಿರುವುದು ತುಂಬಾ ವಿಷಾದಕರ. ಗ್ರಾಮಸ್ಥರು ಹೆಚ್ಚಾಗಿ ಕುಶಲ ಕೈಗಾರಿಕೆ ಹಾಗೂ ವ್ಯವಸಾಯದಲ್ಲಿ ತೊಡಗಿದ್ದಾರೆ. ಮುಂದುವರಿದ ತಾಂತ್ರಿಕ ವಿಜ್ಞಾನದ ಉಪಕರಣಗಳ ಬಳಕೆ, ವ್ಯವಸಾಯ ಸೌಲಭ್ಯಗಳ ಕೊರತೆ ಹಾಗೂ ಇತರ ಕಾರಣಗಳಿಂದಾಗಿ ಹಳ್ಳಿಗಳಲ್ಲಿಯೂ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗುತ್ತಿದೆ. *"ನ್ಯಾಷನಲ್ ಸ್ಯಾಂಪಲ್ ಸರ್ವೆ"ಯ 1971ರ ವರದಿಯ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿರುವ ಶೇ. 40.15 ಕೆಲಸ ಮಾಡಬಲ್ಲ ಜನರಲ್ಲಿ ಶೇ. 38.40ರಷ್ಟು ಜನರು ಮಾತ್ರ ವಿವಿಧ ಕೆಲಸಗಳಲ್ಲಿ ತೊಡಗಿದ್ದು, ಉಳಿದ ಶೇ. 1.75 ಭಾಗದಷ್ಟು ಜನರು ನಿರುದ್ಯೋಗಿಗಳಾಗಿದ್ದಾರೆಂದು ತಿಳಿದು ಬಂದಿದೆ.

---

*ಮೂಲ: India–1974, A reference Annual, Publications Division, Ministry of Information & Broadcasting, Govt. of India (ಪುಟ-135)

ವಿದ್ಯಾಭ್ಯಾಸ ನೀಡುವ ನಮ್ಮ ಪ್ರಯತ್ನಗಳಿಂದ ಹೆಚ್ಚು ಹೆಚ್ಚು ಜನ ಪದವೀದರರೂ ಹಾಗೂ ಉನ್ನತ ವಿದ್ಯಾರ್ಹತೆಗಳನ್ನು ಪಡೆದವರೂ ಆಗುತ್ತಿದ್ದಾರೆ. ಆದರೆ ಪಡೆದ ವಿದ್ಯಾಭ್ಯಾಸ ಯುವಕರಿಗೆ ಸ್ವಯಂಪ್ರೇರಿತ ಕೆಲಸಗಳನ್ನು ಕೈಗೊಳ್ಳುವ ತರಬೇತಿ ನೀಡದಿರುವುದರಿಂದ, ವಿದ್ಯಾವಂತರು ಉದ್ಯೋಗಾವಕಾಶಗಳಿಗಾಗಿ ಪರಾವಲಂಬಿಗಳಾಗಬೇಕಾಗಿದೆ. ಇದರಿಂದಾಗಿ, ದಿನೇ ದಿನೇ ಉದ್ಯೋಗಕ್ಕಾಗಿ ಕಾತುರರಾಗಿರುವವರ ಸಂಖ್ಯೆ ಹೆಚ್ಚುತ್ತಾ ಹೋಗುತ್ತಿದೆ.

ನಮ್ಮಲ್ಲಿ ದಾಖಲಾದ ನಿರುದ್ಯೋಗಿಗಳ ಸಂಖ್ಯೆ ಕೇವಲ ನಾಲ್ಕು ವರ್ಷಗಳಲ್ಲಿ 30.10 ಲಕ್ಷದಿಂದ (1968) 64.57 ಲಕ್ಷಕ್ಕೆ (1972) ಏರಿದೆಯೆಂದು ತಿಳಿದು ಬಂದಿದೆ. ಕ್ರಮವಾಗಿ ಹೆಚ್ಚುತ್ತಿರುವ ನಿರುದ್ಯೋಗಿಗಳ ಸಂಖ್ಯೆಯು ಪಟ್ಟಿ-14ರಲ್ಲಿ ಕಂಡುಬರುತ್ತದೆ.

ಈ ರೀತಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಾ ಹೋದಲ್ಲಿ ಯುವಜನರ ಭವಿಷ್ಯದ ಮೇಲೆ ತೀವ್ರವಾದ ಪರಿಣಾಮ ಬೀರುತ್ತದೆ. ಉದ್ಯೋಗಾವಕಾಶಗಳು ಸಂಕುಚಿತಗೊಳ್ಳುತ್ತಾ ಹೋದಂತೆಲ್ಲಾ ಯುವಕರಿಗೆ ತಮ್ಮ ಭವಿಷ್ಯದಲ್ಲಿಯೇ ಖಚಿತತೆಯಿಲ್ಲದಂತಾಗುತ್ತದೆ. ಇದರಿಂದಾಗುವ ಮಾನಸಿಕ ಪರಿಣಾಮದಿಂದಾಗಿ ಯುವಜನರು ತಮ್ಮ ಭವಿಷ್ಯದತ್ತ ಆಸಕ್ತಿಯನ್ನಾಗಲೀ ಅಥವ ಸ್ಫೂರ್ತಿಯನ್ನಾಗಲೀ ಬೆಳೆಸಿಕೊಳ್ಳಲು ಅವಕಾಶವಿಲ್ಲದಂತಾಗುವುದು.

ಪಟ್ಟಿ–14

### *ದಾಖಲಾದ ನಿರುದ್ಯೋಗಿಗಳ ಸಂಖ್ಯೆ

| ವರ್ಷ | ನಿರುದ್ಯೋಗಿಗಳ ಸಂಖ್ಯೆ (ಲಕ್ಷಗಳಲ್ಲಿ) |
|---|---|
| 1968 | 30.10 |
| 1969 | 34,[illegible]0 |
| 1970 | 40.70 |
| 1971 | 51.00 |
| 1972 | 64.57 |
| *1975 | 82.00 |
| (Feb' 1975) | N A. |

ಮೂಲ : *Deccan Herald, P–7 dated. 20-11-1972

### ವಸತಿ ಸಮಸ್ಯೆ

ಆಹಾರ ಮತ್ತು ನಿರುದ್ಯೋಗಗಳು ಹೇಗೆ ಸಮಸ್ಯೆಗಳೋ, ವಸತಿಯೂ ಸಹ ಅದೇ ರೀತಿಯಲ್ಲಿ ಒಂದು ಸಮಸ್ಯೆ ಎನ್ನಬಹುದು. ಆರ್ಥಿಕವಾಗಿ ಹಿಂದುಳಿದ ನಮ್ಮ ಜನರು ಉತ್ತಮ ವಸತಿ ಸೌಲಭ್ಯಗಳನ್ನು ಪಡೆಯಲು ಹೇಗೆ ತಾನೆ ಸಾಧ್ಯ? ಅದರಲ್ಲಿಯೂ ಈ ಸಮಸ್ಯೆಯನ್ನು ನಮ್ಮಲ್ಲಿನ

---

* Visaria, Pravin, & Jain K. Anrudh, "Country Profiles–India" The Population Council, 245, Park Avenue, New York (P–23)

ಮಧ್ಯಮ ವರ್ಗದ ಹಾಗೂ ಬಡಜನರಲ್ಲಿ ಹೆಚ್ಚು ಕಾಣಬಹುದು. ಅಂತೆಯೇ, ಹಳ್ಳಿಗಳಲ್ಲಿ ಹಾಗೂ ಜನನಿಬಿಡ ಪಟ್ಟಣಗಳಲ್ಲಿ ವಸತಿ ಸಮಸ್ಯೆ ತೀವ್ರವಾಗಿದೆ.

"ನ್ಯಾಷನಲ್ ಸ್ಯಾಂಪಲ್ ಸರ್ವೆ" ನಡೆಸಿದ ಸಮೀಕ್ಷೆಗಳಿಂದ ತಿಳಿದು ಬಂದಿರುವ ಪ್ರಕಾರ—

*"ಶೇ. 85 ರಷ್ಟು ಮನೆಗಳ ಅಡಿಪಾಯ ಮಣ್ಣಿನದು, ಶೇ. 83 ರಷ್ಟು ಮನೆಗಳ ಗೋಡೆಗಳು ಮಣ್ಣಿನಿಂದ ಮಾಡಿದ್ದು, ಶೇ. 70 ರಷ್ಟು ಮನೆಗಳ ಮೇಲ್ಛಾವಣಿ ಹುಲ್ಲು, ಮಣ್ಣು ಮತ್ತು ಗರಿಗಳಿಂದಾಗಿದೆ. ಕೇವಲ ಶೇ. 7 ರಷ್ಟು ಮನೆಗಳ ನೆಲ ಹಾಗೂ ಗೋಡೆಗಳು ಇಟ್ಟಿಗೆ, ಸಿಮೆಂಟ್ ಅಥವ ಕಲ್ಲುಗಳಿಂದಾಗಿವೆ." ಈ ರೀತಿ ಕಟ್ಟಿದ ಮನೆಗಳು ಸಾಕಷ್ಟು ಗಾಳಿ, ಬೆಳಕುಗಳಿಲ್ಲದೆ, ಜನರ ವಾಸಕ್ಕೆ ಅಷ್ಟು ಯೋಗ್ಯವಾಗಿರುವುದಿಲ್ಲ. ಇದರ ಜೊತೆಗೆ ಚರಂಡಿ ಹಾಗೂ ಇತರೆ ಸೌಲಭ್ಯಗಳೂ ಹಳ್ಳಿಗಳಲ್ಲಿ ತೀರಾ ಕಡಿಮೆ.

ನಗರಗಳಲ್ಲಿನ ವಸತಿ ಸಮಸ್ಯೆ ಇತ್ತೀಚೆಗೆ ಉಗ್ರ ರೂಪ ತಳೆಯುತ್ತಿದೆ. 1961ನೆಯ ಇಸವಿಯ ಅಂದಾಜಿನ ಪ್ರಕಾರ 93 ಲಕ್ಷ ಮನೆಗಳ ಕೊರತೆ ನಗರಗಳಲ್ಲಿದ್ದು, ಅದು 1969ರಲ್ಲಿ 1.18 ಕೋಟಿಗಳಿಗೆ ಏರಿತು. ಇದೇ ರೀತಿ ಮುಂದುವರಿದಲ್ಲಿ 1979 ರ ವೇಳೆಗೆ ಭಾರತದ ನಗರಗಳಲ್ಲಿನ ಮನೆಗಳ ಕೊರತೆ 1.54 ಕೋಟಿಗಳಿಗೆ ಹೆಚ್ಚುತ್ತದೆಂದು ನಂಬಲಾಗಿದೆ.

---

* ಮೂಲ :—ನಾರಾಯಣಮ್ಮ ಬಿ.: "ಜನಪ್ರಳಯ" ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (ಪು–181)

ಬೆಂಗಳೂರು ನಗರದಲ್ಲಿ ನಡೆಸಿರುವ ಒಂದು ಸರ್ವೆಯ ಪ್ರಕಾರ, *ಶೇ. 31.4 ರಷ್ಟು ಮನೆಗಳು ಮಾತ್ರ ಉತ್ತಮ ಸ್ಥಿತಿಯಲ್ಲಿದ್ದು, ಶೇ. 47ರಷ್ಟು ಮನೆಗಳು ಸಾಮಾನ್ಯ ವ್ಯವಸ್ಥೆಯಲ್ಲಿವೆ. ಅಂದರೆ ಉಳಿದ ಶೇ. 21.6 ರಷ್ಟು ಮನೆಗಳು ವಾಸಿಸಲು ಅಷ್ಟಾಗಿ ಯೋಗ್ಯವಲ್ಲವೆಂದು ತಿಳಿದುಬಂದಿದೆ. ಭಾರತದ ಎಲ್ಲಾ ಮುಖ್ಯನಗರಗಳಲ್ಲಿಯೂ ಇದೇ ರೀತಿಯ ವಸತಿ ಸೌಲಭ್ಯಗಳ ಕೊರತೆಯನ್ನು ತಪ್ಪದೆ ಕಾಣಬಹುದು.

## ಆರ್ಥಿಕ ಪ್ರಗತಿ

ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದು, ನಮ್ಮ ದೇಶ ಸಾಕಷ್ಟು ಅಭಿವೃದ್ಧಿಯನ್ನು ಸಾಧಿಸಿದೆ. ನಮ್ಮ ಆರ್ಥಿಕ ಸಾಧನೆಯನ್ನು ಹೆಚ್ಚುತ್ತಿರುವ ರಾಷ್ಟ್ರೀಯ ವರಮಾನ ಸ್ಪಷ್ಟೀಕರಿಸುತ್ತದೆ. 1951 ರಲ್ಲಿ 90.7 ಬಿಲಿಯನ್ ರೂಪಾಯಿಗಳಿದ್ದ ರಾಷ್ಟ್ರೀಯ ವರಮಾನ, 1971ರ ಸಮಯಕ್ಕೆ ದ್ವಿಗುಣಗೊಂಡು 188.8 ಬಿಲಿಯನ್ (ಪಟ್ಟಿ-15) ರೂಪಾಯಿಗಳಿಗೆ ಏರಿತು. ಇದೇ ಸಮಯದಲ್ಲಿ ಭಾರತೀಯನ ತಲಾ ವರಮಾನವೂ ಸಹ ಹೆಚ್ಚಾಯಿತು. 1951 ರಲ್ಲಿ 253 ರೂಪಾಯಿಗಳಿದ್ದ ತಲಾ ವರಮಾನವು 1971 ರಲ್ಲಿ 349 ರೂಪಾಯಿಗಳಿಗೆ ಏರಿತು.

---

* ಆಧಾರ :—Souvenir–Mysore State Co-operative Housing Corporation Conference, November (1972)

ಪಟ್ಟಿ–15

## ಭಾರತದಲ್ಲಿ ರಾಷ್ಟ್ರದ ವರಮಾನ ಮತ್ತು ತಲಾ ವರಮಾನ

| ವರ್ಷ | ರಾಷ್ಟ್ರದ ವರಮಾನ (ಬಿಲಿಯನ್ ರೂಪಾಯಿಗಳಲ್ಲಿ) | ತಲಾ ವರಮಾನ (ರೂಪಾಯಿಗಳಲ್ಲಿ) |
|---|---|---|
| 1950–51 | 90·7 | 253 |
| 1951–52 | 93·0 | 255 |
| 1952–53 | 96·4 | 259 |
| 1953–54 | 102·6 | 271 |
| 1954–55 | 105·6 | 274 |
| 1955–56 | 109·3 | 278 |
| 1956–57 | 115·2 | 287 |
| 1957–58 | 113·5 | 277 |
| 1958–59 | 122·4 | 293 |
| 1959–60 | 124·7 | 293 |
| 1960–61 | 132·8 | 306 |
| 1961–62 | 137·4 | 310 |
| 1962–63 | 140·1 | 309 |
| 1963–64 | 147·7 | 318 |
| 1964–65 | 159·0 | 335 |
| 1965–66 | 150·3 | 310 |
| 1966–67 | 152·7 | 308 |
| 1967–68 | 166·9 | 330 |
| 1968–69 | 168·2 | 325 |
| 1969–70 | 180·4 | 341 |
| 1970–71 | 188·8 | 349 |

ಮೂಲ : Family Welfare Planning in India–Year Book (1972-73), Ministry of Health & Family Planning, Dept. of Family Planning, Govt. of India New Delhi (ಪು–37)

ರಾಷ್ಟ್ರೀಯ ಹಾಗೂ ತಲಾ ವರಮಾನವು ಹೆಚ್ಚಿರುವು ದೇನೋ ತುಂಬಾ ಸಂತೋಷಕರವಾದ ವಿಷಯವಾದರೂ, ಬೇರೆ ರಾಷ್ಟ್ರದೊಂದಿಗೆ ನಮ್ಮ ರಾಷ್ಟ್ರದ ವರಮಾನವನ್ನು ಹೋಲಿಸಿದಾಗ ಅದು ತೀರಾ ಕಡಿಮೆ ಎಂಬುದು ತಿಳಿದು ಬರುತ್ತದೆ. ಇದರ ಜೊತೆಗೆ ಬೇರೆ ಬೇರೆ ದೇಶಗಳಲ್ಲಿ ಹಾಗೂ ಭಾರತದಲ್ಲಿ ರಾಷ್ಟ್ರೀಯ ವರಮಾನ ಹೆಚ್ಚಿರುವುದನ್ನು ಗಮನಿಸಿ ದಲ್ಲಿ, ಭಾರತದಲ್ಲಿ ಅಷ್ಟಾಗಿ ಉತ್ತಮ ಪ್ರಗತಿ ಕಂಡುಬರುವುದಿಲ್ಲ. 1958 ರಲ್ಲಿ ನೆರೆಹೊರೆಯ ರಾಷ್ಟ್ರವಾದ ಪಾಕಿಸ್ತಾನದ ವರಮಾನ 62 ಡಾಲರ್‌ಗಳಿದ್ದು, ಆಗ ಭಾರತದ ವರಮಾನ 64 ಡಾಲರ್‌ಗಳಿತ್ತು. ಹತ್ತು ವರ್ಷಗಳ ನಂತರ 1968 ರಲ್ಲಿ ರಾಷ್ಟ್ರೀಯ ವರಮಾನ ಪಾಕಿಸ್ತಾನದಲ್ಲಿ 121 ಡಾಲರ್‌ಗಳಿಗೆ ಏರಿದಾಗ, ಭಾರತದ ವರಮಾನ 71 ಡಾಲರ್‌ಗಳಿಗೆ ಮಾತ್ರ ಏರಿತ್ತು. ಇದೇ ರೀತಿಯ ಹೋಲಿಕೆಯನ್ನು ಪಟ್ಟಿ-16 ರಲ್ಲಿ ಕಾಣಬಹುದು.

ಜನಸಂಖ್ಯಾ ಸಮಸ್ಯೆಯು ಮೇಲೆ ಪರಿಶೀಲಿಸಿರುವ ಅವಶ್ಯಕತೆಗಳ ಮೇಲೆ ಮಾತ್ರ ತನ್ನ ಪರಿಣಾಮ ಬೀರದೆ, ನಮ್ಮ ಜನಜೀವನದ ಪ್ರತಿಯೊಂದು ಕ್ಷೇತ್ರಗಳ ಮೇಲೂ ತನ್ನ ಪ್ರಭಾವವನ್ನು ಬೀರಿದೆ.

**ಈ ನಮ್ಮ ಸಮಸ್ಯೆಗೆ ಪರಿಹಾರವೇನು ?**

ಸಮಸ್ಯೆ ಯಾವ ರೂಪ ತಳೆದಿದ್ದರೂ, ಅದರ ಪರಿಹಾರ ಕ್ಕಾಗಿ ಮತ್ತು ದೇಶದ ಪ್ರಗತಿಗಾಗಿ ಶ್ರಮಿಸುವುದು ನಮ್ಮ ಆದ್ಯ ಕರ್ತವ್ಯ. ಅಂತೆಯೇ, ಭೀಕರ ರೂಪ ತಾಳಿ ಜನರ ಜೀವನದ ಮೇಲೆ ಪರಿಣಾಮ ಬೀರಿರುವ ಜನಸಂಖ್ಯಾ ಸಮಸ್ಯೆ

ಪಟ್ಟಿ--16

## ಪ್ರಪಂಚದ ಕೆಲವು ರಾಷ್ಟ್ರಗಳ ತಲಾ ವರವಮಾನ

| ಕ್ರಮ ಸಂಖ್ಯೆ | ದೇಶ | ರಾಷ್ಟ್ರದ ತಲಾ ವರವಮಾನ (ಅಮೇರಿಕದ ಡಾಲರ್‌ಗಳಲ್ಲಿ) 1958 | 1968 |
|---|---|---|---|
| 1 | ಭಾರತ | 64 | 71 |
| 2 | ಪಾಕಿಸ್ಥಾನ | 62 | 121 |
| 3 | ಬರ್ಮಾ | 53 | 67 |
| 4 | ಈಜಿಪ್ಟ್ | 111 | 156 |
| 5 | ಜಪಾನ್ | 290 | 1,122 |
| 6 | ಇಂಡೋನೇಶ್ಯ | 82 | 86 |
| 7 | ಥಾಯ್‌ಲ್ಯಾಂಡ್ | 80 | 137 |
| 8 | ಆಸ್ಟ್ರೇಲಿಯಾ | 1,124 | 1,991 |
| 9 | ಬ್ರಿಟನ್ | 1,013 | 1,451 |
| 10 | ಅಮೇರಿಕ | 2,115 | 3,578 |
| 11 | ಕೆನಡಾ | 1,503 | 2,247 |

ಮೂಲ: Family Welfare Planning in India Year Book (1972-73) Ministry of Health & Family Planning, Govt. of India, New Delhi (ಪುಟ–124; ಪಟ್ಟಿ–1 ರಿಂದ 3)

ಯನ್ನು ನಿಯಂತ್ರಿಸಲು ಪರಿಹಾರ ಕ್ರಮಗಳನ್ನು ಕೈಗೊಳ್ಳುವುದು ಅವಶ್ಯ. ಈ ಸಮಸ್ಯೆಯ ಪರಿಹಾರದ ಅಗತ್ಯತೆಯನ್ನು ಮುಖ್ಯವಾಗಿ ಎರಡು ದೃಷ್ಟಿಕೋನಗಳಿಂದ ಸರಿಯೆಂದು ಸ್ಪಷ್ಟೀಕರಿಸಬಹುದು.

1. ಎಲ್ಲಾ ದೇಶದ ಸರ್ಕಾರಗಳ ಮುಖ್ಯವಾದ ಉದ್ದೇಶ ತನ್ನ ಜನರಿಗೆ ಅವಶ್ಯಕವಾದ ಸೌಲಭ್ಯಗಳು ದೊರಕು ವಂತೆ ಮಾಡುವುದು. ಈ ಉದ್ದೇಶಕ್ಕಾಗಿ ಮುಂದುವರಿ ಯುತ್ತಿರುವ ರಾಷ್ಟ್ರಗಳು ಹೆಚ್ಚಿನ ಶ್ರಮವಹಿಸಬೇಕಾಗುತ್ತದೆ. ಇದಕ್ಕೆ ಮುಖ್ಯಕಾರಣ, ಅಲ್ಲಿನ ನಿಯಮಿತ ಆರ್ಥಿಕ ಪರಿಸ್ಥಿತಿ ಹಾಗೂ ನಿಸರ್ಗ ಸಂಪತ್ತನ್ನು ಬಳಸಲು ಇರುವ ಸೌಲಭ್ಯಗಳ ಕೊರತೆ. ಮುಂದುವರಿಯುತ್ತಿರುವ ನಮ್ಮ ರಾಷ್ಟ್ರವೂ ಕೂಡ ಇದೇ ಪರಿಸ್ಥಿತಿಯಲ್ಲಿದೆ. ಎಲ್ಲ ಜನತೆಗೆ ಕನಿಷ್ಟ ಅವಶ್ಯಕತೆ ಗಳನ್ನು ಒದಗಿಸಲು ಶ್ರಮಿಸುತ್ತಿರುವ ನಾವು, ಜನಸಂಖ್ಯೆ ಸಮಸ್ಯೆಯನ್ನೂ ಎದುರಿಸಬೇಕಾಗಿದೆ.

2. ಈಗಿರುವ ಜನತೆಗೆ ಅವಶ್ಯಕತೆಗಳನ್ನು ಒದಗಿಸು ವುದು ಎಷ್ಟು ಪ್ರಾಮುಖ್ಯವೋ, ಮುಂದಿನ ಜನಾಂಗಕ್ಕೆ ಉತ್ತಮ ಸೌಲಭ್ಯ ಹಾಗೂ ಉತ್ತಮ ಭವಿಷ್ಯವನ್ನು ಕಲ್ಪಿಸು ವುದೂ ಸಹ ಅಷ್ಟೇ ಮುಖ್ಯ.

## 1. ಕುಟುಂಬಯೋಜನಾ ಕಾರ್ಯಕ್ರಮಗಳು

ಕುಟುಂಬಯೋಜನಾ ಕಾರ್ಯಕ್ರಮಗಳನ್ನು ಮುಖ್ಯ ವಾಗಿ ಎರಡು ದಿಸೆಯಲ್ಲಿ ಕೈಗೊಳ್ಳಬೇಕು. ಒಂದೆಡೆ ವಿವಾಹ ವಾದ ದಂಪತಿಗಳಿಗೆ ಜನನ ನಿಯಂತ್ರಣದ ಬಗ್ಗೆ ತಿಳುವಳಿಕೆ ನೀಡುವುದು, ಮತ್ತೊಂದೆಡೆ ಜನನ ನಿಯಂತ್ರಣಕ್ಕಾಗಿ ಬೇಕಾಗುವ ಸೌಲಭ್ಯಗಳನ್ನು ಎಲ್ಲಾ ದಂಪತಿಗಳಿಗೂ ಸುಲಭ ವಾಗಿ ದೊರಕುವಂತೆ ಮಾಡುವುದು. ಈ ಕಾರ್ಯಕ್ರಮ, ಪ್ರತಿ ಕುಟುಂಬವೂ ಉತ್ತಮ ಜೀವನ ಮಟ್ಟದಲ್ಲಿರಲು

ಸಹಕಾರಿಯಾಗುವುದಲ್ಲದೆ, ದೇಶದ ಸಮಸ್ಯೆಯಾದ ಜನಸಂಖ್ಯಾ ಸ್ಫೋಟನೆಯನ್ನು ನಿವಾರಿಸಲು ಸಹಕಾರಿಯಾಗುತ್ತದೆ.

ಮಿತಕುಟುಂಬದ ಬಗ್ಗೆ ಆಸಕ್ತಿ ಹಾಗೂ ಒಲವು ಮೂಡಿಸುವಂತಹ ಶಿಕ್ಷಣ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಮೊಟ್ಟಮೊದಲನೆಯ ಕೆಲಸ. ಇಂತಹ ಕಾರ್ಯಕ್ರಮಗಳು ಅಕ್ಷರಸ್ಥರಿಗೆ ಮಾತ್ರ ಸೀಮಿತವಾಗದೆ, ಹಳ್ಳಿಗಳಲ್ಲಿ ವಾಸಿಸುವ ಹಾಗೂ ನಗರ ಕೊಳಚೆ ಪ್ರದೇಶಗಳಲ್ಲಿ ಜೀವಿಸುವ ಜನರಿಗೂ ವಿಸ್ತರಿಸಲ್ಪಡಬೇಕು. ಕೈಗೊಂಡ ಶಿಕ್ಷಣ ಕಾರ್ಯಕ್ರಮಗಳು ಮಿತಕುಟುಂಬದ ಲಾಭಗಳನ್ನೂ ಮತ್ತು ಜನಸಂಖ್ಯಾ ಸ್ಫೋಟನೆಯ ಪರಿಣಾಮಗಳನ್ನು ತಿಳಿಸುವುದಲ್ಲದೆ, ಕುಟುಂಬ ಯೋಜಿಸುವ ಅಗತ್ಯತೆಯನ್ನು ಜನರಿಗೆ ಮನಮುಟ್ಟುವಂತೆ ಮಾಡಬೇಕು.

**ಕಾರ್ಯಕ್ರಮದ ಪ್ರಾರಂಭ**

ಭಾರತದ ಮೊಟ್ಟಮೊದಲ "ಜನನ ನಿಯಂತ್ರಣ" ಕೇಂದ್ರವು 1925ರಲ್ಲಿ ಬೊಂಬಾಯಿ ನಗರದಲ್ಲಿ ಪ್ರೊಫೆಸರ್ ರಘುನಾಥ ಧೋಂಡೋಕರ್ವೆಯವರ ಸ್ವಯಂಪ್ರೇರಿತ ಮುಂದಾಳುತನದಲ್ಲಿ ಸ್ಥಾಪಿತಗೊಂಡಿತು. 1930ನೆಯ ಇಸವಿಯಲ್ಲಿ ಪ್ರಥಮ ಸರ್ಕಾರಿ "ಕುಟುಂಬಯೋಜನಾ ಕೇಂದ್ರ" ವನ್ನು ಮೈಸೂರು ನಗರದಲ್ಲಿ ಮೈಸೂರು ಸರ್ಕಾರದವರು ಸ್ಥಾಪಿಸಿದರು. ಇದು ವಿಶ್ವದಲ್ಲೇ ಪ್ರಥಮ ಸರ್ಕಾರೀ ಕುಟುಂಬ ಯೋಜನಾ ಕೇಂದ್ರವಾಗಿತ್ತು. 1932ರಲ್ಲಿ ಅಖಿಲಭಾರತ ಮಹಿಳಾಮಂಡಳಿ ಮತ್ತು 1935ರಲ್ಲಿ ನಡೆದ ಭಾರತೀಯ

ರಾಷ್ಟ್ರೀಯ ಯೋಜನಾಮಂಡಳಿಗಳು ನೀಡಿದ ಮುಂದಾಳುತನ ಹಾಗೂ ಪ್ರೋತ್ಸಾಹ, ಈ ಕಾರ್ಯಕ್ರಮದ ಪ್ರಗತಿಗೆ ಅತಿ ಮುಖ್ಯವಾದವುಗಳು. 1935–36ರಲ್ಲಿ ಭಾರತದಲ್ಲಿ ಪ್ರವಾಸ ನಡೆಸಿದ ಶ್ರೀಮತಿ ಮಾರ್ಗರೇಟ್ ಸ್ಯಾಂಗರ್‌ರವರು ಕುಟುಂಬ ಯೋಜನೆ ಕಾರ್ಯಕ್ರಮದತ್ತ ಆಸಕ್ತಿಯನ್ನು ಹೆಚ್ಚಿಸಿದರು.

ಸ್ವಾತಂತ್ರ್ಯಾನಂತರ, 1949ನೆಯ ವರ್ಷದಲ್ಲಿ, ಭಾರತೀಯ ಕುಟುಂಬ ಯೋಜನಾ ಆಂದೋಲನದ ಇತಿಹಾಸದಲ್ಲೇ ಮಹತ್ವಪೂರ್ಣವಾದ ವರ್ಷ. ಆ ವರ್ಷ ಶ್ರೀಮತಿ ಧನ್ವಂತಿ ರಾಮರಾವ್ ಇವರ ನೇತೃತ್ವದಲ್ಲಿ, **"ಭಾರತ ಕುಟುಂಬ ಯೋಜನಾ ಸಂಸ್ಥೆ"** ಯು ಸ್ಥಾಪಿತಗೊಂಡಿತು. ಈ ಸಂಸ್ಥೆಯು ಕಳೆದ 27 ವರ್ಷಗಳಿಂದ ಸರ್ಕಾರದ ಗಮನವನ್ನು ಕುಟುಂಬ ಯೋಜನೆಯ ಕಡೆ ಸೆಳೆಯುವಲ್ಲಿ, ಈ ಕಾರ್ಯಕ್ರಮ ಜನರ ಕಾರ್ಯಕ್ರಮವಾಗುವಂತೆ ಮಾಡಲು ಮತ್ತು ಅನೇಕ ಖಾಸಗೀ ಸಂಘ-ಸಂಸ್ಥೆಗಳು, ಕಾರ್ಖಾನೆಗಳು ಕುಟುಂಬ ಯೋಜನೆಗೆ ಸಾಮಾಜಿಕ ಸಹಕಾರ ಕಲ್ಪಿಸುವಲ್ಲಿ ಬಹುವಾಗಿ ಶ್ರಮಿಸುತ್ತಿದೆ.

ಭಾರತ ಸರ್ಕಾರದ ಆಸಕ್ತಿ ಕುಟುಂಬಯೋಜನೆಯ ಕಡೆಗೆ ಹರಿದುದು 1951ರಲ್ಲಿ ಎಂದರೆ ತಪ್ಪಾಗಲಾರದು. 1951ನೆಯ ಇಸವಿಯ ಜನಗಣತಿಯ ಆಧಾರದ ಮೇಲೆ ರಿಜಿಸ್ಟ್ರಾರ್ ಜನರಲ್‌ರಾದ ಶ್ರೀ ಆರ್. ಎ. ಗೋಪಾಲ ಸ್ವಾಮಿಯವರು ಜನನ ನಿಯಂತ್ರಣದ ಬಗ್ಗೆ ಮಾಡಿದ ವರದಿಗಳು ಕುಟುಂಬ ಯೋಜನಾ ಕಾರ್ಯಕ್ರಮದ ಮೇಲೆ ತುಂಬಾ ಪ್ರಭಾವವನ್ನು ಬೀರಿದವು. ಭಾರತೀಯ ವೈದ್ಯಕೀಯ ಮಂಡಳಿಯ ನಿರ್ಣಯಗಳು (1951ರಲ್ಲಿ) ಮತ್ತು ಭಾರತ

ಸರ್ಕಾರದ ಯೋಜನಾಮಂಡಳಿಯ ವಿಶೇಷ ಸಮಿತಿಯ ವರದಿಗಳು ಕಾರ್ಯಕ್ರಮ ಪ್ರಗತಿಗೆ ಮತ್ತಷ್ಟು ಪ್ರಭಾವ ಬೀರಿದವು. 1952ರಲ್ಲಿ "ಜನಸಂಖ್ಯಾ ಕಾರ್ಯ ನೀತಿ ಸಮಿತಿ" ಮತ್ತು "ಜನಸಂಖ್ಯಾ ಸಂಶೋಧನ ಹಾಗೂ ಕಾರ್ಯಕ್ರಮ ಸಮಿತಿ"ಗಳು ನೇಮಕಗೊಂಡವಲ್ಲದೆ, ಭಾರತ ಸರ್ಕಾರದ ಆರೋಗ್ಯ ಖಾತೆಯಲ್ಲಿ ಕುಟುಂಬಯೋಜನಾ ವಿಭಾಗವೂ ಪ್ರಾರಂಭವಾಯಿತು. 1953ರಲ್ಲಿ ಕುಟುಂಬಯೋಜನಾ ಸಂಶೋಧನೆ ಮತ್ತು ಕಾರ್ಯಕ್ರಮ ಸಮಿತಿಯ ಸಭೆ ಮತ್ತು 1954ರಲ್ಲಿ ನೇಮಕಗೊಂಡ "ಗ್ರಾಂಟ್ಸ್ ಸಮಿತಿ" ಗಳು ಮೊದಲ ಪಂಚವಾರ್ಷಿಕ ಯೋಜನೆಯ ಸಾಧನೆಗಳು.

ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ (1956–61), ಮತ್ತಷ್ಟು ಪ್ರಾಶಸ್ತ್ಯ ಕೊಡಲಾಯಿತು. 1956ರ ಸೆಪ್ಟೆಂಬರ್‌ನಲ್ಲಿ "ಕೇಂದ್ರ ಕುಟುಂಬಯೋಜನಾ ಮಂಡಲಿ"ಯು ಸ್ಥಾಪಿತವಾಯಿತು. ಈ ಯೋಜನಾ ವೇಳೆಯಲ್ಲಿ 497 ಲಕ್ಷ ರೂಪಾಯಿಗಳು ನಿಗದಿಯಾಗಿದ್ದು, 215.6 ಲಕ್ಷ ರೂಪಾಯಿಗಳನ್ನು ಕುಟುಂಬಯೋಜನಾ ಕಾರ್ಯಕ್ರಮಗಳಿಗಾಗಿ ಬಳಸಲಾಯಿತು.

ಕುಟುಂಬಯೋಜನೆಯ ಬಗ್ಗೆ ಜನರಿಗೆ ಶಿಕ್ಷಣ ನೀಡಲು ಸಂಚಾರಿ ಶಿಕ್ಷಣ ಕೇಂದ್ರಗಳು ಕಾರ್ಯ ನಿರ್ವಹಣೆ ಮತ್ತು ಸಂತಾನ ನಿರೋಧ ಶಸ್ತ್ರ ಚಿಕಿತ್ಸೆಗಳನ್ನು ಜಾರಿಗೆ ತರಲಾಯಿತು.

1961–66ರ ತೃತೀಯ ಪಂಚವಾರ್ಷಿಕ ಯೋಜನೆಯ ಸಮಯದಲ್ಲಿ, ಕುಟುಂಬಯೋಜನಾ ಕಾರ್ಯಕ್ರಮಕ್ಕೆ ಭದ್ರ

ವಾದ ಅಭಿಪ್ರಾಯ ಹಾಕಲಾಯಿತು. ಕುಟುಂಬಯೋಜನಾ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿ, "ವಿಸ್ತರಣಾಶಿಕ್ಷಣ" ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು. ಈ ಯೋಜನೆಯ ಅವಧಿಯಲ್ಲಿ 2,486 ಲಕ್ಷರೂಪಾಯಿಗಳ ವೆಚ್ಚದಿಂದ, ಹೊಸ ವಿಧಾನಗಳನ್ನು ಉಚಿತವಾಗಿ ಜನರಿಗೆ ಒದಗಿಸಲಾಯಿತು.

ನಾಲ್ಕನೆಯ ಪಂಚವಾರ್ಷಿಕ ಯೋಜನೆಯಲ್ಲಿ (1969–74), ಕುಟುಂಬಯೋಜನಾ ಕಾರ್ಯಕ್ರಮವು ನಿರ್ದಿಷ್ಟ ಅವಧಿಯಲ್ಲಿ ಉದ್ದೇಶಿತ ಗುರಿಯನ್ನು ಸಾಧಿಸುವ ಕಾರ್ಯಕ್ರಮವಾಯಿತು. 1969 ರಲ್ಲಿದ್ದ ಜನನ ದರವನ್ನು (ಪ್ರತಿ ವರ್ಷಕ್ಕೆ, ಪ್ರತಿಸಾವಿರ ಜನಸಕ್ಕೆ 39), ಯೋಜನಾ ಅವಧಿಯ ಕೊನೆಗೆ 32ಕ್ಕೆ ಹಾಗೂ ಇನ್ನುಮುಂದಿನ ಯೋಜನಾಂತ್ಯದೊಳಗಾಗಿ 25ಕ್ಕೆ ಇಳಿಸಬೇಕೆಂದು ಗುರಿಯಿಟ್ಟುಕೊಳ್ಳಲಾಯಿತು. ಅರ್ಹ ದಂಪತಿಗಳಿಗೆ ಎಲ್ಲ ಕುಟುಂಬಯೋಜನಾ ವಿಧಾನಗಳ ಬಗ್ಗೆ ತಿಳುವಳಿಕೆ ನೀಡಿ, ಅವರಿಗೆ ಇಷ್ಟಬಂದ ವಿಧಾನವನ್ನು ಬಳಸುವಂತೆ ಮಾಡುವ "ಕೆಫಟೇರಿಯ" ವಿಧಾನವನ್ನು ಅನುಸರಿಸಲಾಯಿತು.

ಈ ಯೋಜನಾವಧಿಯಲ್ಲಿ "ಸಾಮೂಹಿಕ ಶಿಕ್ಷಣ"ಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿ, ತೀವ್ರ ಪ್ರಚಾರ, ಹೆರಿಗೆ ಆಸ್ಪತ್ರೆಗಳಲ್ಲಿ ಜನನಾಂತರದ (Post-partum) ಕಾರ್ಯಕ್ರಮ, ರೋಗ ನಿರೋಧಕ ಕಾರ್ಯಕ್ರಮ (Immunisation) ಮತ್ತು ಪೌಷ್ಟಿಕ ಆಹಾರದ ಕೊರತೆಯ ನಿವಾರಣಾ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು. ಯೋಜನೆಯ ವೆಚ್ಚ 28,004 ಲಕ್ಷ ರೂಪಾಯಿಗಳಾಗಿತ್ತು.

ಐದನೆಯ ಹಾಗೂ ಈಗ ನಡೆಯುತ್ತಿರುವ ಯೋಜನೆಯು (1974-79) ವೆಚ್ಚಕ್ಕಾಗಿ 51,600 ಲಕ್ಷ ರೂಪಾಯಿಗಳನ್ನು ನಿಗದಿ ಮಾಡಲಾಗಿದೆ. ವಿವಿಧ ಯೋಜನೆಗಳ ಅವಧಿಗಳಲ್ಲಿ ಗೊತ್ತುಪಡಿಸಿದ ಹಾಗೂ ಖರ್ಚು ಮಾಡಿರುವ ಮೊಬಲಗನ್ನು ಪಟ್ಟಿ-17ರಲ್ಲಿ ಕಾಣಬಹುದು.

ಪಟ್ಟಿ-17

ಪಂಚವಾರ್ಷಿಕ ಯೋಜನೆಗಳಲ್ಲಿ ಕುಟುಂಬ ಯೋಜನೆಗಾಗಿ ನಿಗದಿ ಮಾಡಿದ ಹಣ ಮತ್ತು ಖರ್ಚು (ಲಕ್ಷ ರೂಪಾಯಿಗಳಲ್ಲಿ)

| ಪಂಚವಾರ್ಷಿಕ ಯೋಜನೆಯ ಅವಧಿ | ನಿಗದಿಮಾಡಿದ ಹಣ | ಖರ್ಚು |
|---|---|---|
| 1951-56 | 65.00 | 14.50 |
| 1956-61 | 497.00 | 215.60 |
| 1961-66 | 2,697.60 | 2,486.00 |
| 1966-69(ವಾರ್ಷಿಕ) | 8.293.00 | 7,046.40 |
| 1969-74 | 31,500.00 | 28,004.00 |
| *1974-79 | 51,600.00 | —— |

*ಮೂಲ : Family Welfare Planning in India, Year Book 1972-73
Ministry of Information & Broadcasting, Dept. of Family Planning—(P-83.) New Delhi.

*Visaria, Pravin & Jain, K. Anrudh — "Country Profiles India" The Population Council, 45, Park Avenue, New York (p-28)

**ಕಾರ್ಯಕ್ರಮ ಸಾಧನೆ**

ಜನ ಸಂಖ್ಯಾ ಸಮಸ್ಯೆಯ ದೃಷ್ಟಿಯಿಂದ, ಕುಟುಂಬ ಯೋಜನಾಕಾರ್ಯಕ್ರಮವು ಸಾಕಷ್ಟು ಸಹಾಯಕವಾಗಿದೆ. ಒಂದೆಡೆ ತಾತ್ಕಾಲಿಕ ವಿಧಾನಗಳು ತಾಯಿ ಮತ್ತು ಮಕ್ಕಳ ಆರೋಗ್ಯವನ್ನು ಸುರಕ್ಷಿತವಾಗಿಡಲು ಸಹಕಾರಿಯಾದರೆ, ಮತ್ತೊಂದೆಡೆ ಶಾಶ್ವತ ವಿಧಾನಗಳು ಕುಟುಂಬಗಳು ಉತ್ತಮ ಜೀವನ ಮಟ್ಟದಲ್ಲಿ ಜೀವಿಸಲು ಅನುಕೂಲ ಮಾಡಿಕೊಡುತ್ತವೆ. ಈ ಕಾರ್ಯಕ್ರಮ ಪ್ರಾರಂಭವಾದಾಗಿನಿಂದ ಅನೇಕ ಸಾವಿರಾರು ಜನರು ವಿವಿಧ ವಿಧಾನಗಳನ್ನು ಬಳಸಿದ್ದಾರೆ. ವಿವಿಧ ವಿಧಾನ ಗಳನ್ನು ಬಳಸುತ್ತಿರುವವರ ಸಂಖ್ಯೆಯು ಕಾರ್ಯಕ್ರಮದ ಸಾಧನೆಯನ್ನು ಸೂಚಿಸುವುದರಲ್ಲಿ ಸಂದೇಹವಿಲ್ಲ. ಆದರೆ, ಒಟ್ಟಾರೆ ಅದು ಜನಸಂಖ್ಯಾ ನಿಯಂತ್ರಣಕ್ಕೆ ಎಷ್ಟರಮಟ್ಟಿಗೆ ಸಹಕಾರಿಯಾಗಿದೆ ಎಂಬುದು ತುಂಬಾ ಮುಖ್ಯವಾದ ಅಂಶ. *ಕುಟುಂಬ ಯೋಜನಾ ಇಲಾಖೆಯು ಮಾಡಿರುವ ಲೆಕ್ಕಾ ಚಾರದ ಪ್ರಕಾರ 1956 ನೆಯ ಇಸವಿಯಿಂದ ಮಾರ್ಚಿ ತಿಂಗಳ 1975 ರೊಳಗಾಗಿ ಸುಮಾರು 206 ಲಕ್ಷ ಜನನಗಳನ್ನು ತಡೆಹಿಡಿಯಲಾಗಿದೆಯೆಂದು ನಂಬಲಾಗಿದೆ. ಅಂದರೆ, ಈ ಅವಧಿಯಲ್ಲಿ ಕುಟುಂಬ ಯೋಜನಾ ವಿಧಾನಗಳು ಬಳಕೆಯಲ್ಲಿಲ್ಲ ದಿದ್ದರೆ, ಈಗಿನ ಜನಸಂಖ್ಯೆ 206 ಲಕ್ಷಗಳಷ್ಟು ಹೆಚ್ಚಾಗಿ

---

*ಮೂಲ :

Visaria, Pravin "Country Profiles–India"
& The Population Council,
Jain K. Anrudh 245, Park Avenue New York
(ಪುಟ - 41)

ರುತ್ತಿತ್ತು. ಇದೇ ಇಲಾಖೆಯ ಅಂದಾಜಿನ ಪ್ರಕಾರ 1996–97 ರ ಹೊತ್ತಿಗೆ ಸುಮಾರು 476 ಲಕ್ಷ ಜನನಗಳನ್ನು ತಡೆ ಹಿಡಿಯುವ ಸಾಧ್ಯತೆಗಳಿವೆ.

ಕುಟುಂಬ ಯೋಜನಾ ಕಾರ್ಯಕ್ರಮದ ಸಾಧನೆಯನ್ನು ಅಳೆಯಲು, "ಜನನದರ"ದ ಹೋಲಿಕೆಯನ್ನೂ ಬಳಸ ಲಾಗುತ್ತದೆ. ಸಾಮಾನ್ಯ ದೃಷ್ಟಿಯಲ್ಲಿ ಹೇಳುವುದಾದರೆ, ಕುಟುಂಬ ಯೋಜನಾ ಕಾರ್ಯಕ್ರಮದ ಸಾಧನೆ, ಜನನ ದರದ ಮೇಲೆ ನೇರವಾದ ಪರಿಣಾಮವನ್ನು ಬೀರುತ್ತದೆ. ಭಾರತದ ಜನನ ದರ * 1960–61 ರಲ್ಲಿ 41.7 (ವರ್ಷಕ್ಕೆ, ಪ್ರತಿ ಸಾವಿರಕ್ಕೆ) ರಷ್ಟಿದ್ದು, 1970–71 ರಲ್ಲಿ 37.5ಕ್ಕೆ ಇಳಿಯಿತು. ನಂತರ, 1974–75 ರಲ್ಲಿ 35ಕ್ಕೆ ಇಳಿಯಿತು. ಅಂದರೆ, ಈಗ್ಗೆ 15 ವರ್ಷಗಳಲ್ಲಿ ಜನನ ದರ 6.7 ರಷ್ಟು ಕಡಿಮೆ ಯಾಗಿದೆ. ಈಗಿರುವ ಗುರಿಗಳ ಪ್ರಕಾರ ಭಾರತದ ಜನನ ದರ 1979 ರ ಹೊತ್ತಿಗೆ 30 ಕ್ಕೂ ಮತ್ತು 19.84 ರ ಸಮಯಕ್ಕೆ 25 ಕ್ಕೂ ಇಳಿಯುವ ಸಂಭವಗಳಿವೆ.

**ಜನಸಂಖ್ಯಾ ಶಿಕ್ಷಣ ಕಾರ್ಯಕ್ರಮಗಳು**

ಇತ್ತೀಚೆಗೆ ಕಾರ್ಯರೂಪಕ್ಕೆ ಬಂದಿರುವ ಶಿಕ್ಷಣ ಕಾರ್ಯ ಕ್ರಮಗಳಲ್ಲಿ, "ಜನಸಂಖ್ಯಾ ಶಿಕ್ಷಣ"ವು ಬಹಳ ಪ್ರಾಮುಖ್ಯತೆ

---

* ಮೂಲ :

Visaria, Pravin & Jain K. Anrudh — "Country Profiles–India" The Population Council 245, Park Avenue, New York

(ಪುಟ – 41)

ಯನ್ನು ಗಳಿಸಿದೆ. ಜನಸಂಖ್ಯಾ ಶಿಕ್ಷಣವು ಒಂದು ವಿಶೇಷ ರೀತಿಯ ಕಾರ್ಯಕ್ರಮವಾಗಿದ್ದು, ಅದು ಮಿತ ಕುಟುಂಬಕ್ಕೆ ಅವಶ್ಯವಿರುವ ಮೌಲ್ಯಗಳನ್ನು ಜನರಲ್ಲಿ ಅದರಲ್ಲೂ ಯುವ ಜನರಲ್ಲಿ ಮೂಡಿಸಲು ಪ್ರಯತ್ನಿಸುತ್ತಿದೆ. ಈ ಕಾರ್ಯಕ್ರಮಗಳು ದೇಶದ ಕೆಲಭಾಗದಲ್ಲಿ ಮಾತ್ರ ನಡೆಯುತ್ತಿದ್ದು, ರಾಷ್ಟ್ರೀಯ ಜನಸಂಖ್ಯಾ ನೀತಿಯ ಘೋಷಣೆಯ (ಏಪ್ರಿಲ್ 16, 1976) ನಂತರ ದೇಶದ ಎಲ್ಲ ಭಾಗಗಳಲ್ಲಿ ಕಾರ್ಯರೂಪಕ್ಕೆ ಬರಲಿದೆ. ಈ ಶಿಕ್ಷಣ ಕಾರ್ಯಕ್ರಮಗಳನ್ನು ಸ್ವಯಂ ಸೇವಾ ಕ್ಷೇತ್ರದಲ್ಲಿ ಪ್ರಾರಂಭಿಸಿದ ಗೌರವ ಸ್ಥಾನ ಭಾರತ ಕುಟುಂಬ ಯೋಜನಾ ಸಂಸ್ಥೆಗೆ ಸಲ್ಲುತ್ತದೆ.

ಜನಸಂಖ್ಯಾ ಶಿಕ್ಷಣದ ಮುಖ್ಯ ಉದ್ದೇಶ, ಜನರಲ್ಲಿ ಜನಸಂಖ್ಯಾ ಸ್ಫೋಟನೆ ಹಾಗೂ ಅದರ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸುವುದು. ಇದರ ಜೊತೆಗೆ ಮಿತ ಕುಟುಂಬವನ್ನು ಸಾಮಾಜಿಕ ರೂಢಿಯಲ್ಲಿ ಆಚರಣೆಗೆ ತರಲು ಇರುವ ಅಡಚಣೆಗಳನ್ನು ವಿಶ್ಲೇಷಿಸುತ್ತದೆ.

ಭಾರತದಲ್ಲಿ ಸಾಮಾನ್ಯವಾಗಿ ದೊಡ್ಡ ಕುಟುಂಬದತ್ತ ಹೆಚ್ಚಿನ ಆಸಕ್ತಿಯಿದೆ ಎನ್ನಬಹುದು. ನಮ್ಮಲ್ಲಿರುವ ಮೂಢ ನಂಬಿಕೆಗಳು, ಗಂಡು ಮಗುವಿಗೆ ನೀಡುವ ಪ್ರಾಮುಖ್ಯತೆ, ಮಕ್ಕಳು ಆಸ್ತಿಯೆಂಬ ಮನೋಭಾವನೆ, ಬಾಲವಿವಾಹ ಹಾಗೂ ಅನಕ್ಷರತೆಗಳೇ ನಮ್ಮ ಕುಟುಂಬಗಳು ದೊಡ್ಡದಾಗಿ ಬೆಳೆಯಲು ಕಾರಣಗಳು. ಈ ಪರಿಸ್ಥಿತಿಯಲ್ಲಿ ಬೆಳೆದ ಮಕ್ಕಳು, ತಾವೂ ದೊಡ್ಡ ಕುಟುಂಬವನ್ನು ಪಡೆಯಬೇಕೆಂಬ ಮನೋಭಾವನೆ ಹೊಂದುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ, ಮುಂದಿನ

ತಂದೆ-ತಾಯಿಗಳಾಗುವ ಇಂದಿನ ಮಕ್ಕಳಿಗೆ ಮತ್ತು ಯುವ ಜನರಿಗೆ ''**ಯೋಜಿತ ಕುಟುಂಬ**''ದ ಬಗ್ಗೆ ತಿಳುವಳಿಕೆ ನೀಡುವುದು ಅತ್ಯವಶ್ಯ. ಜನಸಂಖ್ಯಾ ಶಿಕ್ಷಣ, ಈ ದಿಸೆಯಲ್ಲಿ ತನ್ನ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದೆ. ಒಟ್ಟಿನಲ್ಲಿ ಹೇಳುವುದಾದರೆ, ಜನಸಂಖ್ಯಾ ಶಿಕ್ಷಣವು ಮಿತ ಕುಟುಂಬದ ಸ್ಥಾಪನೆಗೆ ಬೇಕಾಗುವ ಮಾನಸಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ಜನರಲ್ಲಿ ಮೂಡಿಸುತ್ತದೆ.

### 3. ಅಭಿವೃದ್ಧಿ ಕಾರ್ಯಕ್ರಮಗಳು

ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳು ಹೇಗೆ ಅವಶ್ಯವೋ, ಹಾಗೆಯೇ ಸಮಾಜಾಭಿವೃದ್ಧಿ ಕಾರ್ಯಕ್ರಮಗಳೂ ಸಹ ಅಗತ್ಯ. ಜನರಲ್ಲಿ ಸಮಾಜದ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವಂತೆ ಪ್ರೇರೇಪಿಸುವುದೇ ಈ ಕಾರ್ಯಕ್ರಮಗಳ ಮುಖ್ಯ ಉದ್ದೇಶ. ಸಮಾಜಾಭಿವೃದ್ಧಿಗಾಗಿ ದುಡಿಯಬೇಕೆಂಬ ಮನೋಭಾವನೆಯನ್ನು ಜನರಲ್ಲಿ ಬೆಳೆಸಲು, ಈ ಕಾರ್ಯಕ್ರಮಗಳು ಸಹಕಾರಿಯಾಗುತ್ತವೆ.

ಕುಟುಂಬ ಯೋಜನಾಕಾರ್ಯಕ್ರಮಗಳನ್ನು ಪ್ರತ್ಯೇಕವಾಗಿ ಕೈಗೊಳ್ಳುವುದರ ಬದಲಾಗಿ, ಅಭಿವೃದ್ಧಿ ಕಾರ್ಯಕ್ರಮಗಳೊಂದಿಗೆ ಸಾಮುದಾಯಿಕವಾಗಿ ಕೈಗೊಂಡಲ್ಲಿ ಕಾರ್ಯಕ್ರಮದ ಯಶಸ್ಸು ಸುಲಭ ಸಾಧ್ಯ. ಅಭಿವೃದ್ಧಿ ಕಾರ್ಯಕ್ರಮಗಳ ಪ್ರಾರಂಭಕ್ಕೆ ಮೊದಲು, ಅವುಗಳನ್ನು ನಡೆಸುವಂತಹ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳನ್ನು ರೂಪಿಸಬೇಕು. ಯುವಕ ಮಂಡಲ, ಮಹಿಳಾ ಮಂಡಲ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ಸ್ಥಾಪನೆಗೆ ಜನರನ್ನು ಉತ್ಸಾಹಿಗಳನ್ನಾಗಿ

ಮಾಡುವುದರ ಜೊತೆಗೆ, ಈಗಾಗಲೇ ಇರುವ ಸಂಘಸಂಸ್ಥೆಗಳ ಸದಸ್ಯರನ್ನು ಮತ್ತಷ್ಟು ಪ್ರೋತ್ಸಾಹಿಸಬೇಕು.

ಒಮ್ಮೆ ಮೇಲೆ ಸೂಚಿಸಿದಂತಹ ಸಂಘ, ಸಂಸ್ಥೆಗಳು ಕಾರ್ಯರೂಪಕ್ಕೆ ಬಂದರೆ, ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಬಹುದು.

ಈ ಕೆಳಕಂಡ ಕಾರ್ಯಕ್ರಮಗಳು ತುಂಬಾ ಸೂಕ್ತವೆನಿಸುತ್ತವೆ.

(ಅ) ಯುವಕ ಸಂಘ, ಮಹಿಳಾ ಮಂಡಳಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ಸ್ಥಾಪನೆಗೆ ಜನರನ್ನು ಸಂಘಟಿಸಿ, ಅವುಗಳನ್ನು ನಿರ್ಮಾಣಮಾಡುವುದು.

(ಆ) ಸ್ಥಾಪನೆಯಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿರುವ ಸಂಘ ಸಂಸ್ಥೆಗಳೊಂದಿಗೆ ಸೇರಿ ಆರೋಗ್ಯ ಮತ್ತು ಶಿಕ್ಷಣ ಕಾರ್ಯಕ್ರಮಗಳನ್ನು ಏರ್ಪಡಿಸುವುದು.

(ಇ) ವಯಸ್ಕರ ಶಿಕ್ಷಣ ಮತ್ತು ಸಾಮೂಹಿಕ ಶಿಕ್ಷಣ ಕಾರ್ಯಕ್ರಮಗಳನ್ನು ತೀವ್ರಗತಿಯಲ್ಲಿ ಕೈಗೊಳ್ಳುವುದು.

(ಈ) ವಸತಿ ಸೌಲಭ್ಯಗಳು ಹಾಗೂ ಉತ್ತಮ ಆರೋಗ್ಯ ಸೌಲಭ್ಯಗಳನ್ನು ಜನರಿಗೆ ಒದಗಿಸುವುದು.

(ಉ) ಮಹಿಳೆಯರ ವಿದ್ಯಾಭ್ಯಾಸಕ್ಕೆ ಹಾಗೂ ಅವರಿಗೆ ಸಮಾನತೆ ದೊರಕಿಸುವಂತಹ ವಿವಿಧ ಕಾರ್ಯಕ್ರಮಗಳನ್ನು ರೂಪಿಸುವುದು.

ಈ ಮೇಲಿನ ಕಾರ್ಯಕ್ರಮಗಳ ಜೊತೆಗೆ, ಸಮಾಜದ ಬೇಡಿಕೆ ಮತ್ತು ಅಗತ್ಯತೆಗಳ ಆಧಾರದ ಮೇಲೆ ಹೊಸ ಹೊಸ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಬಹುದು.

ಇಂಥಹ ಅಭಿವೃದ್ಧಿ ಕಾರ್ಯಕ್ರಮಗಳು ಜನರಿಗೆ ಉತ್ತಮ ಜೀವನ ಮಟ್ಟವನ್ನು ಒದಗಿಸುವುದಲ್ಲದೆ, ಜನರ ಆಶಾ ಭಾವನೆಯನ್ನು ಉತ್ತಮಗೊಳಿಸುತ್ತವೆ. ಉತ್ತಮ ಸೌಲಭ್ಯಗಳು ಹಾಗೂ ಆಶಾಭಾವನೆಗಳಿಂದಾಗಿ ಜನರು ವೈಯುಕ್ತಿಕ ಮತ್ತು ಸಾಮುಹಿಕವಾಗಿ ಮುಂದುವರಿಯಲು ಪ್ರಯತ್ನಿಸುತ್ತಾರೆ. ಈ ಎಲ್ಲ ಕಾರ್ಯಕ್ರಮಗಳ ಜೊತೆಗೆ, ಸಮಸ್ಯೆಯ ಪರಿಹಾರಕ್ಕಾಗಿ ನಮ್ಮ ಆಹಾರ ಮತ್ತು ಇತರೆ ವಸ್ತುಗಳ ಉತ್ಪಾದನೆಯನ್ನು ಹೆಚ್ಚಿಸಬೇಕು.

ಮೇಲೆ ಸೂಚಿಸಿರುವ ಎಲ್ಲಾ ಕಾರ್ಯಕ್ರಮಗಳು ದೇಶದ ಪ್ರಗತಿಗೆ ಮತ್ತು ಸಮಸ್ಯೆಗಳ ಪರಿಹಾರಕ್ಕೆ ಸಹಕಾರಿಯಾಗುತ್ತವೆ. ಕಾರ್ಯಕ್ರಮಗಳು ತಾವಾಗಿಯೇ ಅವಶ್ಯವಾದ ಯಶಸ್ಸು ಸಾಧಿಸಲು ಸಾಧ್ಯವಿಲ್ಲ. ಇಂತಹ ಎಲ್ಲಾ ಕಾರ್ಯಕ್ರಮಗಳಿಗೂ ಕಾರ್ಯಕರ್ತರ ಶ್ರದ್ಧೆ, ಜನರ ಪಾಲ್ಗೊಳ್ಳುವಿಕೆ, ಮುಖಂಡರುಗಳ ಮುಂದಾಳುತನ ಮತ್ತು ಸರ್ಕಾರದ ದಿಟ್ಟಹೆಜ್ಜೆ ಅತ್ಯಗತ್ಯ.

# ಗ್ರಂಥಋಣ

1 Agarawala, S. N. *India's Population Problems*
Tata McGraw-Hill Publishing Company Ltd. Bombay (1972)

2 Berelson, Bernard *National Programmes in Family Planning*
Achievements & Problems.
Meenakshi Prakashan Begum Bridge, Meerut (1969)

3 Bhan, R. K. *A Book of Statistics on Population Education*
The Pathfinder Fund, G-16 South Extension-II, New Delhi-110049 (1974)

4 Chand, Gyan *Population in Perspective*
Orient Longman Ltd. 3/5, Asaf Ali Road
New Delhi—110001

5 Family Welfare — Planning in India—
*Year Book 1972–73*
Govt. of India
Ministry of Health & Family Planning,
Department of Family Planning
New Delhi (1973)

6 ಹಂದೆ, ಕೆ. ಆರ್, — ಜನಸಂಖ್ಯಾ ಶಿಕ್ಷಣದ ರೂಪ ರೇಷಗಳು
ಮಣಿಪಾಲ ಕಾಲೇಜ್ ಆಫ್ ಎಡ್ಯುಕೇಷನ್, ಉಡ್ಪಿ,
ದಕ್ಷಿಣ ಕನ್ನಡ (1974)

7 *INDIA–1974*— A Reference Annual
Govt. of India
Ministry of Information & Broadcasting,
New Delhi (1974)

8 Jain, S. P. — *Indian Population Situation*
Population Education Cell, Dept. of Social Sciences & Humanities, National Institute of Education, N.C.E.R.T.
Sri Aurobindo Marg,
New Delhi–16 (1971)

| | | |
|---|---|---|
| 9 | Mascarenhas, Marie Mignan | *Population Education for Quality of Life*<br>Family Welfare Centre, 21, Museum Road<br>Bangalore–25 |
| 10 | Mehta, T. S. | *Population Education in School Curricula*<br>Population Education Cell, National Institute of Education N.C.E.R.T.<br>New Delhi–110066<br>(1970) |
| 11 | ನಾರಾಯಣಮ್ಮ, ಬಿ. | ''ಜನಪ್ರಳಯ''<br>ಕನ್ನಡ ಸಾಹಿತ್ಯ ಪರಿಷತ್ತು<br>ಬೆಂಗಳೂರು (1976) |
| 12 | Ogale, S. L. | *The Tragedy of Too Many*<br>Academic Books Ltd.<br>Bombay (1969) |
| 13 | Subbaiah, B. V. | *The World Population Crisis*<br>A Case Study of India<br>Kitab Mahal<br>Allahabad (1972) |

14 Thomson S. Warren
Lewis T. David *Population Problem*
Tata McGraw-Hill Publishing Company Ltd
Bombay (1963)

15 Visaria, Pravin
&
Jain. K. Anrudh *Country Profiles-India*
The Population Council
245, Park Avenue
New York (1976)

*Papers & Periodicals*

1 The Journal–Family Welfare
(December 1972)
Family Planning Association of India
1, Jeevan Udyog,
Dadabhai Naoroji Road,
Bombay—400001

2 The Economic Times (Annual 1972)
Economic Research Bureau
Bennett Coleman & Co. Ltd., Bombay (1972)

3 Rao, K. S.
Anantha Subba "Demographic Changes in India & its Impact on Education" F.P.A.I– Bangalore Branch.
Paper presented at a Seminar on 24th Sept. 1972

| | | |
|---|---|---|
| 4 | Rao, K. S. Anantha Subba | Basic Statistics of Population & its Related Subjects" Paper presented at a seminar for Secondary School Heads on 28th March 1973 |
| 5 | Brochure | Dharwar District's an All Time Achievement: District Level Action Committee on Family Planning Dharwar (1973) |
| 6 | Souvener | Mysore State Co-operative Conference November (1972) |
| 7 | "ರಾಷ್ಟ್ರೀಯ ಜನಸಂಖ್ಯಾನೀತಿ" | ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬಯೋಜನಾ ಇಲಾಖೆ ನವದೆಹಲಿ (ಏಪ್ರಿಲ್ 16, 1976) |
| 8 | Wadia, Ava Bai B | *Population Education A plan of Action for JPAI* Reprint from the The Journal of Family Welfare Vol. XVII No. 3, March 1971 |

ಪ್ರಚಾರೋಪನ್ಯಾಸ ಮಾಲೆ

| | | |
|---|---|---|
| 1. | ನಗೆಯ ನೆಲೆ | ಎಸ್. ಕೆ. ರಾಮಚಂದ್ರರಾವ್ |
| 2. | ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| 3. | ಛಯ-ಸರಳ ವಿಶ್ಲೇಷಣೆ | ಎಂ. ಶಿವರಾಂ |
| 4. | ಶ್ರೀ ಕವಿ ಲಕ್ಷ್ಮೀಶ | ಜಿ. ಎಸ್. ಸಿದ್ಧಲಿಂಗಯ್ಯ |
| 5. | ಶಾಂತಿನಾಥ ಕವಿ | ಕಮಲಾ ಹಂಪನಾ |
| 6. | ಉತ್ತಂಗಿ ಚನ್ನಪ್ಪ | ಸ. ಸ. ಮಾಳವಾಡ |
| 7. | ಬಯಲಾಟಗಳು | ಚಂದ್ರಶೇಖರ ಕಂಬಾರ |
| 8. | ನಾಟಕದಲ್ಲಿ ನವ್ಯತೆ | ಪಿ. ಲಂಕೇಶ್ |
| 9. | ದ್ರಾವಿಡ ಸಂಖ್ಯಾವಾಚಕಗಳು | ಹಂಪ. ನಾಗರಾಜಯ್ಯ |
| 10. | ಉಪಭಾಷೆ | ಕೃಷ್ಣ ಪರಮೇಶ್ವರ ಭಟ್ಟ |
| 11. | ಅರವಿಂದರ ವಿಚಾರಧಾರೆ | ಸಿ. ಕೆ. ವೆಂಕಟರಾಮಯ್ಯ |
| 12. | ಪೂರ್ಣಯೋಗಿ ಶ್ರೀ ಅರವಿಂದರು | ಕೋ. ಚನ್ನಬಸಪ್ಪ |
| 13. | ಪ್ರಾಚೀನ ಸಂಸ್ಕೃತಿ | ಎಸ್. ಕೆ. ರಾಮಚಂದ್ರರಾವ್ |
| 14. | ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ | ಎನ್. ಜಿ. ಚಂದ್ರಶೇಖರಯ್ಯ |
| 15. | ಸಣ್ಣ ಕೈಗಾರಿಕೆಗಳು | ಆರ್. ಎಸ್. ಆರಾಧ್ಯ |
| 16. | ವಿವಾಹ ಪದ್ಧತಿಗಳು | ಎಸ್. ಕೆ ರಾಮಚಂದ್ರರಾವ್ |
| 17. | ಪಾನೀಯಗಳು | ಕೆ. ಎಸ್. ಲಕ್ಷ್ಮಣರಾವ್ |
| 18. | ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿಶೆಟ್ಟಿ |
| 19. | ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| 20. | ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ್ |
| 21. | ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| 22. | ಕುರುಡು | ಎಸ್. ಟಿ. ಪುಟ್ಟಣ್ಣ |
| 23. | ಕಣ್ಣಿನ ರೋಗಗಳು | ಎಸ್. ಟಿ. ಪುಟ್ಟಣ್ಣ |
| 24. | ಕ್ಷಯ | ಎಂ. ಬಸವರಾಜೆ ಅರಸು |
| 25. | ಮೂತ್ರಪಿಂಡದ ಕೆಲವು ರೋಗಗಳು | ಎಂ. ಬಸವರಾಜೆ ಅರಸು |
| 26. | ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| 27. | ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| 28. | ಅಂತರ್ಜಲ | ಸಿ. ನಾಗಣ್ಣ |
| 29. | ಪಂಪ | ತ. ಸು. ಶಾಮರಾಯ |
| 30. | ದೇಹರಚನೆ ಹಾಗೂ ಮೂಳೆಗಳು | ಎಸ್. ಬಿ. ವಸಂತ ಕುಮಾರ್ |
| 31. | ಶ್ರೀನಿವಾಸ ರಾಮಾನುಜನ್ | ಜಿ. ಟಿ. ನಾರಾಯಣರಾವ್ |
| 32. | ಮಹಾಕವಿ ಕುಮಾರನಾಶಾನ್ | ಬಿ. ಕೆ. ತಿಮ್ಮಪ್ಪ, ಟಿ. ವೆಂಕಟಲಕ್ಷ್ಮಿ |
| 33. | ತುಳ್ಳಲ್‌ಕವಿ ಕುಂಜನ್ ನಂಬಿಯಾರ್ | ಬಿ. ಕೆ. ತಿಮ್ಮಪ್ಪ, ಟಿ. ವೆಂಕಟಲಕ್ಷ್ಮಿ |
| 34. | ಪರಮಾಣುಶಾಸ್ತ್ರ | ಎಸ್. ಕೆ. ರಾಮಚಂದ್ರರಾವ್ |